KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಆಗಸ್ಟ್ ೨೪, ೨೦೦೬ (ಭಾದ್ರಪದ ೨, ಶಕವರ್ಷ ೧೯೨೮) | ಸಂಚಿಕೆ ೩೪ |
|---|---|---|

## ಭಾಗ - ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಸಂವ್ಯಶಾಇ 57 ರಾಶಾಪ್ರ 2006, ಬೆಂಗಳೂರು, ದಿನಾಂಕ: 17ನೇ ಜುಲೈ 2006**

ಕರ್ನಾಟಕ ಸಂಚಾರ ನಿಯಂತ್ರಣ ಅಧಿನಿಯಮ, 1960 (1960 ರ18), ಕರ್ನಾಟಕ ಸಂಚಾರ ನಿಯಂತ್ರಣ ನಿಯಮಗಳು, 1979, ಕರ್ನಾಟಕ ಸಂಚಾರ ಸಾರ್ವಜನಿಕ ವಾಹನಗಳ ನಿಯಂತ್ರಣ) ನಿಯಮಗಳು, 1979 ಮತ್ತು ಕರ್ನಾಟಕ ಸಂಚಾರ (ಹೆದ್ದಾರಿಗಳ ಮೇಲಣ ಸಂಚಾರ ನಿಯಂತ್ರಣ) ನಿಯಮಗಳು, 1979ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

### ಕರ್ನಾಟಕ ಸಂಚಾರ ನಿಯಂತ್ರಣ ಅಧಿನಿಯಮ, 1960

### ಪ್ರಕರಣಗಳ ಅನುಕ್ರಮಣಿಕೆ

### ಅಧ್ಯಾಯ-I

### ಪ್ರಾರಂಭಿಕ

ಪ್ರಕರಣಗಳು:



### ಅಧ್ಯಾಯ-II

### ಸಂಚಾರ ನಿಯಂತ್ರಣ

10. ವಾಹನ ಅಥವಾ ಪ್ರಾಣಿಯನ್ನು ನೋಡಿಕೊಳ್ಳುವವರಿಲ್ಲದೆ ಬಿಟ್ಟುಹೋಗುವುದು
11. ಕೆಲವು ಸಂದರ್ಭಗಳಲ್ಲಿ ನಿಲ್ಲಿಸುವುದು ಚಾಲಕನ ಕರ್ತವ್ಯವಾಗಿರುವುದು
12. ಮಾಹಿತಿ ನೀಡುವುದು ವಾಹನದ ಅಥವಾ ಪ್ರಾಣಿಯ ಮಾಲೀಕನ ಕರ್ತವ್ಯವಾಗಿರುವುದು
13. ವ್ಯಕ್ತಿಗೆ ಅಪಘಾತವಾದಾಗ ಮತ್ತು ಅವನಿಗೆ ಗಾಯ ಉಂಟಾದಾಗ ಚಾಲಕನ ಕರ್ತವ್ಯ
14. ಸಂಚಾರ ನಿಯಂತ್ರಣಕ್ಕಾಗಿ ನಿಯಮ ರಚನಾಧಿಕಾರ

## ಅಧ್ಯಾಯ – III

## ವಾಹನಗಳ ನಿರ್ಮಾಣ, ಸಲಕರಣೆ ಮತ್ತು ನಿರ್ವಹಣೆ

15. ನಿರ್ಮಾಣ ಮತ್ತು ನಿರ್ವಹಣೆಗೆ ಸಂಬಂಧಿಸಿದಂತೆ ಸಾಮಾನ್ಯ ಉಪಬಂಧ
16. ವಾಹನಗಳ ನಿರ್ಮಾಣ, ಸಲಕರಣೆ ಮತ್ತು ನಿರ್ವಹಣೆಗಾಗಿ ನಿಯಮಗಳ ರಚನಾಧಿಕಾರ

## ಅಧ್ಯಾಯ – IV

## ಸಾರ್ವಜನಿಕ ವಾಹನಗಳ ನಿಯಂತ್ರಣ

17. ಸಾರ್ವಜನಿಕ ವಾಹನಗಳ ನಿಯಂತ್ರಣಕ್ಕಾಗಿ ನಿಯಮ ರಚನಾಧಿಕಾರ

## ಅಧ್ಯಾಯ – V

## ಸಂಕೀರ್ಣ

18. ಅಪರಾಧಗಳ ದಂಡನೆಯ ಸಂಬಂಧದ ಸಾಮಾನ್ಯ ಉಪಬಂಧ
19. ವಾಹನವನ್ನು ನಿರ್ಲಕ್ಷ್ಯದಿಂದ ಅಥವಾ ಅಪಾಯಕರ ರೀತಿಯಲ್ಲಿ ನಡೆಸುವುದು
20. ವಾರಂಟಿಲ್ಲದೆ ದಸ್ತಗಿರಿ ಮಾಡುವ ಅಧಿಕಾರ
21. ಪ್ರಕರಣಗಳ ಕ್ಷಿಪ್ರ ವಿಲೆ
22. ನಿಯಮಗಳನ್ನು ರಾಜ್ಯ ವಿಧಾನಮಂಡಲದ ಮುಂದೆ ಇಡುವುದು
23. ಅಸ್ತಿತ್ವದಲ್ಲಿರುವ ಉಪವಿಧಿಗಳನ್ನು ಮುಂದುವರಿಸುವುದು
24. ನಿರಸನ ಮತ್ತು ಉಳಿಸುವಿಕೆಗಳು

## ಅನುಸೂಚಿಗಳು

ಮೊದಲನೇ ಅನುಸೂಚಿ
ಎರಡನೇ ಅನುಸೂಚಿ
ಮೂರನೇ ಅನುಸೂಚಿ
ನಾಲ್ಕನೇ ಅನುಸೂಚಿ

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

### I

**1960ರ ಅಧಿನಿಯಮ 18.–** ಸಾರ್ವಜನಿಕ ಸ್ಥಳಗಳಲ್ಲಿ ಸಂಚಾರ ನಿಯಂತ್ರಣಕ್ಕೆ ಸಂಬಂಧಿಸಿದಂತೆ ರಾಜ್ಯದ ಬೇರೆ ಬೇರೆ ಪ್ರದೇಶಗಳಲ್ಲಿ ಜಾರಿಯಲ್ಲಿರುವ ಕಾನೂನು ಏಕರೂಪವಾಗಿಲ್ಲ. ಈ ಸಂಬಂಧದಲ್ಲಿ ಹೊಸ ಮೈಸೂರು ರಾಜ್ಯದಾದ್ಯಂತ ಒಂದು ಏಕ ರೂಪದ ಕಾನೂನು ಇರುವುದು ಅವಶ್ಯವಾಗಿದೆ. ಭಾರತ ಸರ್ಕಾರವು ಕಳುಹಿಸಿಕೊಟ್ಟಿರುವ ಮಾದರಿ ಹೆದ್ದಾರಿಗಳ ವಿಧೇಯಕದ ಉಪಬಂಧಗಳ ರೀತಿಯಲ್ಲಿ, ರಾಷ್ಟ್ರೀಯ ಮತ್ತು ರಾಜ್ಯ ಹೆದ್ದಾರಿಗಳ ಮೇಲಿನ ಮೋಟಾರು ವಾಹನ ಸಂಚಾರದ ಹೊರತಾದ ಸಂಚಾರ ನಿಯಂತ್ರಣಕ್ಕಾಗಿ ರಾಜ್ಯ ಸರ್ಕಾರವು ಸಹ ಶಾಸನ ರಚನೆಯನ್ನು ಕೈಗೊಳ್ಳಬಹುದೆಂದು ಭಾರತ ಸರ್ಕಾರವು ಸಲಹೆ ನೀಡಿದೆ. ಸದರಿ ವಿಧೇಯಕವನ್ನು ಈ ಉದ್ದೇಶಕ್ಕಾಗಿ ಮಂಡಿಸಲಾಗಿದೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV –2 ಎ, ದಿನಾಂಕ 5 ನೇ ಮಾರ್ಚ್ 1959ರಲ್ಲಿ ಪುಟ 48 ರಲ್ಲಿ ಪ್ರಕಟಿಸಲಾಗಿದೆ.)

### II

**1986ರ ತಿದ್ದುಪಡಿ ಮಾಡುವ ಅಧಿನಿಯಮ 25.–** ಕರ್ನಾಟಕ ಸಂಚಾರ ನಿಯಂತ್ರಣ ಅಧಿನಿಯಮ, 1960ರ (1960ರ ಕರ್ನಾಟಕ ಅಧಿನಿಯಮ ಸಂಖ್ಯೆ 18) 14 ನೇ ಪ್ರಕರಣದ (2) ನೇ ಉಪ ಪ್ರಕರಣದ (1) ನೇ ಖಂಡವು ಒಬ್ಬರಿಗಿಂತ ಹೆಚ್ಚು ವ್ಯಕ್ತಿಗಳು ಸವಾರಿ ಮಾಡುವ ಉದ್ದೇಶಕ್ಕಾಗಿ ವಿನ್ಯಾಸಗೊಳಿಸಲಾದ ಸೈಕಲ್‌ಗಳ ಹೊರತು, ಇತರ ಸೈಕಲ್‌ಗಳಲ್ಲಿ ಒಬ್ಬರಿಗಿಂತ ಹೆಚ್ಚು ವ್ಯಕ್ತಿಗಳು ಏಕ ಕಾಲದಲ್ಲಿ ಸವಾರಿ ಮಾಡುವುದನ್ನು ನಿಷೇಧಿಸುತ್ತದೆ.

ಪ್ರಸ್ತುತ, ಬೈಸಿಕಲ್ ಬಡವರ ಒಂದು ಸಾರಿಗೆ ಸಾಧನವಾಗಿದ್ದು, ಒಂದು ಬೈಸಿಕಲ್‌ನ ಮೇಲೆ ಇಬ್ಬರು ವ್ಯಕ್ತಿಗಳು ಏಕ ಕಾಲದಲ್ಲಿ ಸವಾರಿ ಮಾಡಲು ಯಾವುದೇ ಪ್ರತಿಷೇಧ ಇರತಕ್ಕದ್ದಲ್ಲ ಎಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV–2ಎ, ದಿನಾಂಕ 7 ನೇ ಫೆಬ್ರವರಿ 1986 ರಲ್ಲಿ ಸಂಖ್ಯೆ 84 ಆಗಿ ಪುಟ 3 ರಲ್ಲಿ ಪ್ರಕಟಿಸಲಾಗಿದೆ.)

### III

**2000ದ ತಿದ್ದುಪಡಿ ಮಾಡುವ ಅಧಿನಿಯಮ 22.– ಟಿಪ್ಪಣಿ.–** ಜಾರಿಯಲ್ಲಿಲ್ಲದ ಮತ್ತು ಪ್ರಚಲಿತವಲ್ಲದ ಕೆಲವು ಕಾನೂನುಗಳನ್ನು ನಿರಸಗೊಳಿಸುವಾಗ, ಈ ಅಧಿನಿಯಮವೂ ಸೇರಿದಂತೆ ಕೆಲವು ಅಧಿನಿಯಮಗಳಿಗೆ ಕೆಲವು ಆನುಷಂಗಿಕ ತಿದ್ದುಪಡಿಗಳನ್ನು ಮಾಡಲಾಗಿದೆ.

1960ರ [1][ಕರ್ನಾಟಕ ಅಧಿನಿಯಮ][1] ಸಂಖ್ಯೆ 18

*(1960ರ ಡಿಸೆಂಬರ್ ಹದಿನೈದನೆಯ ದಿನದಂದು [1][ಕರ್ನಾಟಕ ರಾಜ್ಯಪತ್ರ][1]ದಲ್ಲಿ ಮೊದಲು ಪ್ರಕಟವಾಗಿದೆ.)*

[1][ಕರ್ನಾಟಕ][1] ಸಂಚಾರ ನಿಯಂತ್ರಣ ಅಧಿನಿಯಮ, 1960

*(1960ರ ನವೆಂಬರ್ ಏಳನೆಯ ದಿನದಂದು ರಾಜ್ಯಪಾಲರ ಅನುಮೋದನೆಯನ್ನು ಪಡೆದಿದೆ.)*

(1986ರ ಕರ್ನಾಟಕ ಅಧಿನಿಯಮ ಸಂಖ್ಯೆ 25 ರ ಮೂಲಕ ತಿದ್ದುಪಡಿಯಾದಂತೆ)

**[1][ಕರ್ನಾಟಕ ರಾಜ್ಯ][1] ದ ಹೆದ್ದಾರಿಗಳಲ್ಲಿ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಸಂಚಾರ ನಿಯಂತ್ರಣ ಮತ್ತು ಅದಕ್ಕೆ ಸಂಬಂಧಿಸಿದ ಇತರ ವಿಷಯಗಳಿಗೆ ಉಪಬಂಧ ಕಲ್ಪಿಸುವ ಒಂದು ಅಧಿನಿಯಮ.**

**1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

[1][ಕರ್ನಾಟಕ ರಾಜ್ಯ][1] ದ ಹೆದ್ದಾರಿಗಳಲ್ಲಿ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಸಂಚಾರ ನಿಯಂತ್ರಣ ಮತ್ತು ಅದಕ್ಕೆ ಸಂಬಂಧಿಸಿದ ಇತರ ವಿಷಯಗಳಿಗೆ ಉಪಬಂಧ ಕಲ್ಪಿಸುವುದು ವಿಹಿತವಾಗಿರುವುದರಿಂದ;

**1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

ಭಾರತ ಗಣರಾಜ್ಯದ ಹನ್ನೊಂದನೆಯ ವರ್ಷದಲ್ಲಿ [1][ಕರ್ನಾಟಕ ರಾಜ್ಯ][1] ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:-

**1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

## ಅಧ್ಯಾಯ – I
## ಪ್ರಾರಂಭಿಕ

**1. ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು [1][ಕರ್ನಾಟಕ][1] ಸಂಚಾರ ನಿಯಂತ್ರಣ ಅಧಿನಿಯಮ, 1960 ಎಂದು ಕರೆಯತಕ್ಕದ್ದು.

(2) ಇದು ಇಡೀ [1][ಕರ್ನಾಟಕ ರಾಜ್ಯ][1] ಕ್ಕೆ ಅನ್ವಯಿಸುತ್ತದೆ.

**1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

(3) (i) ಅದು, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ರಾಜ್ಯಪತ್ರದಲ್ಲಿ ಗೊತ್ತುಪಡಿಸಬಹುದಾದಂಥ [1][ದಿನಾಂಕ][1] ದಂದು ಜಾರಿಗೆ ಬರತಕ್ಕದ್ದು.

**1. ಅಧಿನಿಯಮವು ಅಧಿಸೂಚನೆಯ ಮೂಲಕ 15.8.1979ರಿಂದ ಜಾರಿಗೆ ಬಂದಿದೆ. ಅಧಿಸೂಚನೆಯ ಪಾಠವು ...ನೇ ಪುಟದಲ್ಲಿದೆ.**

(ii) ಯಾವುದೇ ಪ್ರದೇಶದಲ್ಲಿ 1959ರ [1][ಕರ್ನಾಟಕ][1] ಸಾರ್ವಜನಿಕ ಸಾಗಣೆ ಅಧಿನಿಯಮವು ಜಾರಿಯಲ್ಲಿದ್ದರೆ, 1959ರ [1][ಕರ್ನಾಟಕ][1] ಸಾರ್ವಜನಿಕ ಸಾಗಣೆ ಅಧಿನಿಯಮದ ಉಪಬಂಧಗಳಿಗೆ ಮತ್ತು ಅದರ ಅಡಿಯಲ್ಲಿ ರಚಿಸಲಾದ ನಿಯಮಗಳಿಗೆ ಸಂವಾದಿಯಾದ ಈ ಅಧಿನಿಯಮದ ಅಧ್ಯಾಯ IV ರ ಉಪಬಂಧಗಳು ಮತ್ತು ಅದರ ಅಡಿಯಲ್ಲಿ ರಚಿಸಲಾದ ನಿಯಮಗಳು ಅಂಥ ಪ್ರದೇಶಕ್ಕೆ ಅನ್ವಯವಾಗತಕ್ಕದ್ದಲ್ಲ, ಮತ್ತು ಹಿಂದೆ ಹೇಳಿದುದನ್ನುಳಿದು ಈ ಅಧಿನಿಯಮದ ಉಪಬಂಧಗಳು ಅಂಥ ಪ್ರದೇಶದಲ್ಲಿ ಪರಿಣಾಮ ಹೊಂದಿರತಕ್ಕದ್ದು.

**1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸುವ ಹೊರತು,–

(ಎ) "ಪ್ರಾಣಿ" ಎಂದರೆ, ಯಾವುದೇ ಆನೆ, ಒಂಟೆ, ಕುದುರೆ, ಕತ್ತೆ, ಹೇಸರಗತ್ತೆ, ಜಾನುವಾರು, ಕುರಿ ಅಥವಾ ಮೇಕೆ;

(ಬಿ) "ಚಾಲಕ" ಎಂದರೆ, ಒಂದು ವಾಹನದ ಸಂದರ್ಭದಲ್ಲಿ, ತತ್ಕಾಲದಲ್ಲಿ ವಾಹನದ ಪ್ರಭಾರವನ್ನು ಮತ್ತು ನಿಯಂತ್ರಣವನ್ನು ಹೊಂದಿರುವ ವ್ಯಕ್ತಿ, ಮತ್ತು ಒಂದು ಪ್ರಾಣಿಯ ಸಂದರ್ಭದಲ್ಲಿ ಪ್ರಾಣಿಯನ್ನು ಹೊಡೆದುಕೊಂಡು ಹೋಗುವ, ನಡೆಸಿಕೊಂಡು ಹೋಗುವ, ಸವಾರಿ ಮಾಡುವ ಅಥವಾ ಇತರೆ ಯಾವುದೇ ರೀತಿಯಲ್ಲಿ ಅದನ್ನು ನಿರ್ವಹಿಸುವ ಅಥವಾ ನಿಯಂತ್ರಿಸುವ ಯಾವನೇ ವ್ಯಕ್ತಿ, ಮತ್ತು "ಹೊಡೆದುಕೊಂಡು ಹೋಗು", "ಹೊಡೆದುಕೊಂಡು ಹೋಗುವ" ಮತ್ತು "ಹೊಡೆದುಕೊಂಡು ಹೋಗಲ್ಪಡುವ" ಎಂಬ ಪದಗಳನ್ನು ಸಂದರ್ಭಾನುಸಾರವಾಗಿ ಅರ್ಥೈಸಿಕೊಳ್ಳತಕ್ಕದ್ದು;

(ಸಿ) "ಹೆದ್ದಾರಿ" ಎಂದರೆ, ಒಂದು ರಸ್ತೆ, ಬೀದಿ, ಗಲ್ಲಿ, ಸವಾರಿ ಹಾದಿ ಅಥವಾ ಕಾಲುದಾರಿಯಾಗಲಿ, ಸಮತಟ್ಟಾಗಿರಲಿ ಅಥವಾ ಸಮತಟ್ಟಾಗಿಲ್ಲದಿರಲಿ ಅಥವಾ ಸರ್ಕಾರವು ಅಥವಾ ಸ್ಥಳೀಯ ಪ್ರಾಧಿಕಾರವು ಒಡೆತನವನ್ನು ಹೊಂದಿರುವ ಜಮೀನಿನ ಮೇಲಿನ ಅಥವಾ ಸಾರ್ವಜನಿಕರು ಉಪಯೋಗಿಸಿ ದಾರಿಯ ಹಕ್ಕನ್ನು ಆರ್ಜಿಸಿರುವ ಅಥವಾ ಹೊಂದಿರುವ ಒಬ್ಬ ಖಾಸಗಿ ವ್ಯಕ್ತಿಗೆ ಸೇರಿದ ಜಮೀನಿನ ಮೇಲಿನ ಯಾವುದೇ ಸಾರ್ವಜನಿಕ ಮುಖ್ಯ ರಸ್ತೆ ಮತ್ತು ಅದು ಈ ಮುಂದಿನವುಗಳನ್ನು ಒಳಗೊಳ್ಳುತ್ತದೆ,–

(i) ಯಾವುದೇ ಅಂಥ ಮುಖ್ಯ ರಸ್ತೆಯ ಇಳಿಜಾರು, ಕಿರುದಾರಿ, ಬಂಡಿ ಜಾಡಿನ ಗುಂಡಿಗಳು, ಕಾಲುದಾರಿಗಳು, ರಸ್ತೆ ಪಕ್ಕದ ನೆಲಗಟ್ಟಿನ ಕಾಲುದಾರಿಗಳು ಮತ್ತು ಪಕ್ಕದ ಚರಂಡಿಗಳು;

(ii) ಅಂಥ ಮುಖ್ಯ ರಸ್ತೆಗಳ ಮೇಲೆ ಅಥವಾ ಅವುಗಳಿಗೆ ಅಡ್ಡಲಾಗಿ ಕಟ್ಟಲಾದ ಎಲ್ಲಾ ಸೇತುವೆಗಳು, ಅಡಿಗಾಲುವೆಗಳು, ಒಡ್ಡುದಾರಿಗಳು, ಸಾಗಣೆದಾರಿಗಳು ಅಥವಾ ಇತರ ರಸ್ತೆ ರಚನೆಗಳು; ಮತ್ತು

(iii) ಮುಖ್ಯ ರಸ್ತೆಯ ಮೇಲಿರುವ ಅಥವಾ ಮುಖ್ಯ ರಸ್ತೆಗೆ ಸೇರಿದ ಜಮೀನಿನ ಮೇಲಿರುವ ಮರಗಳು, ಬೇಲಿಗಳು, ಕಂಬಗಳು ಮತ್ತು ಇತರ ಹೆದ್ದಾರಿ ಉಪಸಾಧನಗಳು ಮತ್ತು ಸಾಮಗ್ರಿಗಳು ಮತ್ತು ಸಾಮಗ್ರಿಗಳ ರಾಶಿಗಳು;

(ಡಿ) **"ಮೋಟಾರು ವಾಹನ"** ಎಂದರೆ, ಮೋಟಾರು ವಾಹನಗಳ ಅಧಿನಿಯಮ, 1939ರಲ್ಲಿ (1939ರ ಕೇಂದ್ರಾಧಿನಿಯಮ IV) ಪರಿಭಾಷಿಸಿರುವ ಒಂದು ಮೋಟಾರು ವಾಹನ;

(ಇ) **"ಅಧಿಸೂಚನೆ"** ಎಂದರೆ, ರಾಜ್ಯಪತ್ರದಲ್ಲಿ ಪ್ರಕಟವಾದ ಅಧಿಸೂಚನೆ;

(ಎಫ್) **"ಅನುಮತಿ ಪತ್ರ"** ಎಂದರೆ, ಒಂದು ಸಾರ್ವಜನಿಕ ವಾಹನವಾಗಿ ವಾಹನದ ಉಪಯೋಗವನ್ನು ಅಧಿಕೃತಗೊಳಿಸುವ ದಸ್ತಾವೇಜನ್ನು ನೀಡಲು ಸಕ್ಷಮವಾದ ಪ್ರಾಧಿಕಾರವು ನೀಡಿದ ದಸ್ತಾವೇಜು;

(ಜಿ) **"ನಿಯಮಿಸಲಾದುದು"** ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ನಿಯಮಗಳಿಂದ ನಿಯಮಿಸಲಾದುದು;

(ಹೆಚ್) **"ಸಾರ್ವಜನಿಕ ಸ್ಥಳ"** ಎಂದರೆ, ಸಾರ್ವಜನಿಕರಿಗೆ ಪ್ರವೇಶಾಧಿಕಾರವಿರುವ ಅಥವಾ ಅದರ ಮೇಲೆ ಅವರು ಹಾದು ಹೋಗಲು ಹಕ್ಕನ್ನು ಹೊಂದಿರುವ, ಮುಖ್ಯ ರಸ್ತೆ ಆಗಿರುವ ಅಥವಾ ಆಗಿರದ ರಸ್ತೆ, ಬೀದಿ, ದಾರಿ ಅಥವಾ ಇತರ ಸ್ಥಳ ಮತ್ತು ಇದು ಸಾರ್ವಜನಿಕ ವಾಹನಕ್ಕೆ ಪ್ರಯಾಣಿಕರನ್ನು ಹತ್ತಿಸಿಕೊಳ್ಳುವ ಅಥವಾ ಅದರಿಂದ ಇಳಿಸುವ ಯಾವುದೇ ಸ್ಥಳ ಅಥವಾ ನಿಲ್ದಾಣವನ್ನು ಒಳಗೊಳ್ಳುತ್ತದೆ;

(ಐ) **"ಸಾರ್ವಜನಿಕ ವಾಹನ"** ಎಂದರೆ, ಮೋಟಾರು ವಾಹನದ ಹೊರತು, ಬಾಡಿಗೆಗಾಗಿ ಅಥವಾ ಪ್ರತಿಫಲಕ್ಕಾಗಿ ಪ್ರಯಾಣಿಕರನ್ನು ಅಥವಾ ಸರಕುಗಳನ್ನು ಸಾಗಿಸಲು ಉಪಯೋಗಿಸಲಾದ ಅಥವಾ ಉಪಯೋಗಿಸುವುದಕ್ಕಾಗಿ ನಿರ್ಮಿಸಿದ ಅಥವಾ ಅಳವಡಿಸಿದ ಯಾವುದೇ ವಾಹನ;

(ಜೆ) **"ಅನುಸೂಚಿ"** ಎಂದರೆ, ಈ ಅಧಿನಿಯಮದ ಒಂದು ಅನುಸೂಚಿ;

(ಕೆ) **"ವಾಹನ"** ಎನ್ನುವುದರಲ್ಲಿ, ಮಾನವ, ಪ್ರಾಣಿ, ಮೋಟಾರು, ಆವಿ ಅಥವಾ ವಿದ್ಯುಚ್ಛಕ್ತಿಯೂ ಸೇರಿ ಯಾವುದೇ ಬಗೆಯ ಶಕ್ತಿಯಿಂದ ಎಳೆಯಲಾಗುವ, ತಳ್ಳಲಾಗುವ ಅಥವಾ ಓಡಿಸಲಾಗುವ, ಚಕ್ರವುಳ್ಳ ಯಾವುದೇ ವಾಹನ ಮತ್ತು ಯಾವುದೇ ಕೈಬಂಡಿ, ಜಾರುಬಂಡಿ, ಹಿಮನೇಗಿಲು, ಕುದುರೆ ಗಾಡಿ ಅಥವಾ ಅಂಥದ್ದೇ ವಾಹನವನ್ನು ಒಳಗೊಳ್ಳುತ್ತದೆ, ಆದರೆ ಮೋಟಾರು ವಾಹನವನ್ನು ಒಳಗೊಳ್ಳುವುದಿಲ್ಲ.

## ಅಧ್ಯಾಯ–II
## ಸಂಚಾರ ನಿಯಂತ್ರಣ

**3. ವಾಹನಗಳ ಬಳಕೆಯನ್ನು ನಿರ್ಬಂಧಿಸಲು ಅಧಿಕಾರ.–** ರಾಜ್ಯ ಸರ್ಕಾರಕ್ಕೆ ಅಥವಾ ಈ ಬಗ್ಗೆ ರಾಜ್ಯ ಸರ್ಕಾರದಿಂದ ಅಧಿಕಾರ ಪಡೆದ ಯಾವುದೇ ಪ್ರಾಧಿಕಾರಕ್ಕೆ, ಸಾರ್ವಜನಿಕ ಸುರಕ್ಷೆಯ ಅಥವಾ ಅನುಕೂಲದ ದೃಷ್ಟಿಯಿಂದ ಅಥವಾ ಯಾವುದೇ ರಸ್ತೆ ಅಥವಾ ಸೇತುವೆಯ ಸ್ವರೂಪದಿಂದ, ಅವಶ್ಯಕವೆಂದು ಮನದಟ್ಟಾದರೆ, ರಾಜ್ಯಪತ್ರದಲ್ಲಿ ಅಧಿಸೂಚಿಸುವ ಮೂಲಕ, ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ವಿನಾಯಿತಿ ಮತ್ತು ಷರತ್ತುಗಳಿಗೊಳಪಟ್ಟು, ವಾಹನಗಳ ಅಥವಾ ಪ್ರಾಣಿಗಳ ಸಂಚಾರವನ್ನು ಸಾಮಾನ್ಯವಾಗಿ ನಿರ್ದಿಷ್ಟಪಡಿಸಲಾದ ಪ್ರದೇಶದಲ್ಲಿ ಅಥವಾ ನಿರ್ದಿಷ್ಟಪಡಿಸಲಾದ ಹೆದ್ದಾರಿಯಲ್ಲಿ ಅಥವಾ ಹೆದ್ದಾರಿಯ ಭಾಗದಲ್ಲಿ ನಿಷೇಧಿಸಬಹುದು ಅಥವಾ ನಿರ್ಬಂಧಿಸಬಹುದು ಮತ್ತು ಅಂಥ ಯಾವುದೇ ನಿಷೇಧ ಅಥವಾ ನಿರ್ಬಂಧವನ್ನು ವಿಧಿಸಿದಾಗ 4 ನೇ ಪ್ರಕರಣದ ಅಡಿಯಲ್ಲಿ ಸೂಕ್ತ ಸ್ಥಳಗಳಲ್ಲಿ ಯುಕ್ತ ಸಂಚಾರ ಚಿಹ್ನೆಗಳನ್ನು ಇರಿಸುವಂತೆ ಅಥವಾ ನಿಲ್ಲಿಸುವಂತೆ ಮಾಡತಕ್ಕದ್ದು:

ಪರಂತು, ಈ ಪ್ರಕರಣದ ಅಡಿಯಲ್ಲಿ ಯಾವುದೇ ನಿಷೇಧ ಹಾಗೂ ನಿರ್ಬಂಧವು ಒಂದು ತಿಂಗಳಿಗೆ ಮೀರದಂಥ ಅವಧಿಯವರೆಗೆ ಜಾರಿಯಲ್ಲಿರಬೇಕಾದಲ್ಲಿ, ಆ ಬಗ್ಗೆ ರಾಜಪತ್ರದಲ್ಲಿ ಅಧಿಸೂಚಿಸುವ ಅವಶ್ಯಕತೆಯಿರತಕ್ಕದ್ದಲ್ಲ.

**4. ಸಂಚಾರ ಚಿಹ್ನೆಗಳು.–** (1) ರಾಜ್ಯ ಸರ್ಕಾರ ಅಥವಾ ಈ ಸಂಬಂಧದಲ್ಲಿ ರಾಜ್ಯ ಸರ್ಕಾರದಿಂದ ಅಧಿಕಾರ ಪಡೆದ ಯಾವುದೇ ಪ್ರಾಧಿಕಾರವು, 3 ನೆಯ ಪ್ರಕರಣದ ಅಡಿಯಲ್ಲಿ ವಿಧಿಸಲಾದ ಯಾವುವೇ ನಿಷೇಧಗಳನ್ನು ಅಥವಾ ನಿರ್ಬಂಧಗಳನ್ನು ಸಾರ್ವಜನಿಕರ ಗಮನಕ್ಕೆ ತರುವ ಉದ್ದೇಶಕ್ಕಾಗಿ ಅಥವಾ ಸಾಮಾನ್ಯವಾಗಿ ಮೋಟಾರು ವಾಹನ ಸಂಚಾರಕ್ಕೆ ಹೊರತಾದ ಇತರ ಸಂಚಾರವನ್ನು ನಿಯಂತ್ರಿಸುವ ಉದ್ದೇಶಕ್ಕಾಗಿ ಯಾವುದೇ ಹೆದ್ದಾರಿ ಅಥವಾ ಸಾರ್ವಜನಿಕ ಸ್ಥಳದಲ್ಲಿ ಯಾವುದೇ ಗಾತ್ರ, ಬಣ್ಣ, ಬಗೆಯ ಅಥವಾ ವಿವರಗಳುಳ್ಳ ಸಂಚಾರ ಚಿಹ್ನೆಗಳನ್ನು ಇರಿಸುವಂತೆ ಅಥವಾ ನಿಲ್ಲಿಸುವಂತೆ ಮಾಡಬಹುದು ಅಥವಾ ಹಾಗೆ ಇರಿಸಲು ಅಥವಾ ನಿಲ್ಲಿಸಲು ಅನುಮತಿಸಬಹುದು.

(2) ಮೊದಲನೆಯ ಅನುಸೂಚಿಯಲ್ಲಿ ಉಪಬಂಧಿಸಲಾದ ಯಾವುದೇ ಉದ್ದೇಶಕ್ಕಾಗಿ (1) ನೆಯ ಉಪ ಪ್ರಕರಣದ ಅಡಿಯಲ್ಲಿ ನಿಲ್ಲಿಸಲಾದ ಸಂಚಾರ ಚಿಹ್ನೆಗಳು ಮೊದಲನೆಯ ಅನುಸೂಚಿಯಲ್ಲಿ ಹೇಳಿರುವ ಅರ್ಥಗಳನ್ನು ಹೊಂದಿರತಕ್ಕದ್ದು, ಆದರೆ, ರಾಜ್ಯ ಸರ್ಕಾರದಿಂದ ಈ ಸಂಬಂಧದಲ್ಲಿ ಅಧಿಕಾರ ಪಡೆದ ಪ್ರಾಧಿಕಾರವು ಸದರಿ ಅಧಿಸೂಚನೆಯಲ್ಲಿ ನಿರೂಪಿಸಲಾದ ಯಾವುದೇ ಚಿಹ್ನೆಗೆ ಕನ್ನಡ ಲಿಪಿಯಲ್ಲಿ ಪದಗಳು, ಅಕ್ಷರಗಳು ಅಥವಾ ಅಂಕಿಗಳನ್ನು ಸೇರಿಸಬಹುದು ಅಥವಾ ಹಾಗೆ ಮಾಡಲು ಅಧಿಕಾರ ನೀಡಬಹುದು. ಆ ಬರವಣಿಗೆಗಳು ಮೊದಲನೇ ಅನುಸೂಚಿಯಲ್ಲಿ ಹೇಳಲಾದ ಪದಗಳು, ಅಕ್ಷರಗಳು ಅಥವಾ ಅಂಕಿಗಳ ಗಾತ್ರ ಮತ್ತು ಬಣ್ಣದವುಗಳು ಆಗಿರತಕ್ಕದ್ದು.

(3) (1) ನೆಯ ಉಪ ಪ್ರಕರಣದಿಂದ ಉಪಬಂಧಿಸಲಾದಂತೆ ಹೊರತು, ಈ ಅಧಿನಿಯಮದ ಪ್ರಾರಂಭದ ನಂತರ ಯಾವುವೇ ಸಂಚಾರ ಚಿಹ್ನೆಗಳನ್ನು, ಯಾವುದೇ ಹೆದ್ದಾರಿಯಲ್ಲಿ ಅಥವಾ ಅದರ ಹತ್ತಿರ ಇರಿಸಕೂಡದು ಅಥವಾ ನಿಲ್ಲಿಸಕೂಡದು; ಆದರೆ, ಸಂಚಾರ ಚಿಹ್ನೆಗಳನ್ನು ಇರಿಸಲು ಅಥವಾ ನಿಲ್ಲಿಸಲು ಸಕ್ಷಮವಾದ ಯಾವುದೇ ಪ್ರಾಧಿಕಾರವು ಈ ಅಧಿನಿಯಮದ ಪ್ರಾರಂಭಕ್ಕೆ ಮುಂಚೆ ನಿಲ್ಲಿಸಿದ ಎಲ್ಲಾ ಸಂಚಾರ ಚಿಹ್ನೆಗಳನ್ನು ಈ ಅಧಿನಿಯಮದ ಉದ್ದೇಶಕ್ಕಾಗಿ (1) ನೇ ಉಪ ಪ್ರಕರಣದ ಉಪಬಂಧಗಳ ಮೇರೆಗೆ ನಿಲ್ಲಿಸಲಾದ ಸಂಚಾರ ಚಿಹ್ನೆಗಳೆಂದು ಭಾವಿಸತಕ್ಕದ್ದು.

(4) ರಾಜ್ಯ ಸರ್ಕಾರದಿಂದ ಅಧಿಸೂಚನೆಯ ಮೂಲಕ ಈ ಸಂಬಂಧದಲ್ಲಿ ಅಧಿಕಾರ ಪಡೆದ ಯಾವುದೇ ಪ್ರಾಧಿಕಾರವು, ಯಾವುದೇ ಚಿಹ್ನೆಯನ್ನು ಅಥವಾ ಜಾಹೀರಾತನ್ನು, ಯಾವುದೇ ಸಂಚಾರ ಚಿಹ್ನೆಯನ್ನು ದೃಷ್ಟಿಗೆ ಬೀಳದಂತೆ ಇಡಲಾಗಿದೆ ಎಂದು ಅಭಿಪ್ರಾಯಪಟ್ಟರೆ ಅಥವಾ ಯಾವುದೇ ಚಿಹ್ನೆ ಅಥವಾ ಜಾಹೀರಾತು ಗೊಂದಲವುಂಟು ಮಾಡುವಷ್ಟರ ಮಟ್ಟಿಗೆ ಸಂಚಾರ ಚಿಹ್ನೆಯಂತೆಯೇ ಇರುವುದರಿಂದಾಗಿ ಸಂಚಾರ ಚಿಹ್ನೆಯನ್ನು ಹೋಲುತ್ತಿದೆಯೆಂದು ಅಭಿಪ್ರಾಯಪಟ್ಟರೆ, ಅಂಥ ಚಿಹ್ನೆಯನ್ನು ಅಥವಾ ಜಾಹೀರಾತನ್ನು ತೆಗೆಯಬಹುದು ಅಥವಾ ತೆಗೆಯುವಂತೆ ಮಾಡಬಹುದು.

(5) ಈ ಪ್ರಕರಣದ ಮೇರೆಗೆ ಇರಿಸಲಾದ ಅಥವಾ ನಿಲ್ಲಿಸಲಾದ ಯಾವುದೇ ಸಂಚಾರ ಚಿಹ್ನೆಯನ್ನು ಯಾವನೇ ವ್ಯಕ್ತಿಯು ಉದ್ದೇಶಪೂರ್ವಕವಾಗಿ ತೆಗೆಯತಕ್ಕದ್ದಲ್ಲ, ವ್ಯತ್ಯಾಸಗೊಳಿಸತಕ್ಕದ್ದಲ್ಲ, ವಿರೂಪಗೊಳಿಸತಕ್ಕದ್ದಲ್ಲ ಅಥವಾ ಯಾವುದೇ ರೀತಿಯಲ್ಲೂ ಅಕ್ರಮವಾಗಿ ತಿದ್ದತಕ್ಕದ್ದಲ್ಲ.

(6) ಈ ಪ್ರಕರಣದ ಮೇರೆಗೆ ಸಂಚಾರ ಚಿಹ್ನೆಯನ್ನು ಯಾವ ಉದ್ದೇಶಕ್ಕಾಗಿ ಇರಿಸಲಾಗಿದೆಯೋ ಅಥವಾ ನಿಲ್ಲಿಸಲಾಗಿದೆಯೋ ಆ ಉದ್ದೇಶವನ್ನು ನಿರುಪಯುಕ್ತಗೊಳಿಸುವಂತೆ ಅದಕ್ಕೆ ಆಕಸ್ಮಿಕವಾಗಿ ಹಾನಿಯುಂಟುಮಾಡುವ ಯಾವನೇ ವ್ಯಕ್ತಿಯು, ಆ ಘಟನೆಯ ಸಂದರ್ಭಗಳನ್ನು ಹತ್ತಿರದ ಪೊಲೀಸ್ ಠಾಣೆಗೆ ಸಾಧ್ಯವಾದಷ್ಟು ಬೇಗನೆ ಮತ್ತು ಯಾವುದೇ ಸಂದರ್ಭಗಳಲ್ಲೂ 24 ಗಂಟೆಗಳೊಳಗಾಗಿ ವರದಿ ಮಾಡತಕ್ಕದ್ದು.

5. **ಮುಖ್ಯ ರಸ್ತೆಗಳು.–** ರಾಜ್ಯ ಸರ್ಕಾರ ಅಥವಾ ರಾಜ್ಯ ಸರ್ಕಾರದಿಂದ ಈ ಸಂಬಂಧದಲ್ಲಿ ಅಧಿಕಾರ ಪಡೆದ ಯಾವುದೇ ಪ್ರಾಧಿಕಾರವು, ಅಧಿಸೂಚನೆಯ ಮೂಲಕ ಅಥವಾ ಮೊದಲ ಅನುಸೂಚಿಯ ಭಾಗ 'ಎ' ದಲ್ಲಿ ಉಲ್ಲೇಖಿಸಲಾದ ಯುಕ್ತ ಸಂಚಾರ ಚಿಹ್ನೆಗಳನ್ನು ಸೂಕ್ತ ಸ್ಥಳಗಳಲ್ಲಿ ನಿಲ್ಲಿಸುವ ಮೂಲಕ, ಎರಡನೆಯ ಅನುಸೂಚಿಯಲ್ಲಿ ಒಳಗೊಂಡ ವಿನಿಯಮಗಳ ಉದ್ದೇಶಗಳಿಗಾಗಿ ಕೆಲವು ರಸ್ತೆಗಳನ್ನು ಮುಖ್ಯ ರಸ್ತೆಗಳಾಗಿ ಹೆಸರಿಸಬಹುದು.

6. **ಸಂಚಾರ ಚಿಹ್ನೆಗಳನ್ನು ಪಾಲಿಸುವುದು ಕರ್ತವ್ಯವಾಗಿರುವುದು.–** (1) ಒಂದು ವಾಹನದ ಅಥವಾ ಪ್ರಾಣಿಯ ಪ್ರತಿಯೊಬ್ಬ ಚಾಲಕನು, ಆಜ್ಞಾಪಕ ಸಂಚಾರ ಚಿಹ್ನೆಯಿಂದ ಕೊಡಲಾಗುವ ಯಾವುದೇ ಸೂಚನೆಗನುಸಾರವಾಗಿ ಮತ್ತು ಎರಡನೆಯ ಅನುಸೂಚಿಯಲ್ಲಿ ಹೇಳಲಾದ ಚಾಲನಾ ವಿನಿಯಮಗಳಿಗನುಸಾರ ಅದನ್ನು ನಡೆಸತಕ್ಕದ್ದು ಮತ್ತು ಯಾವುದೇ ಸಾರ್ವಜನಿಕ ಸ್ಥಳದಲ್ಲಿ ಆ ಸಮಯದಲ್ಲಿ ಸಂಚಾರ ನಿಯಂತ್ರಣದಲ್ಲಿ ನಿರತನಾದ ಯಾವನೇ ಪೊಲೀಸ್ ಅಧಿಕಾರಿಯು ಅವನಿಗೆ ನೀಡುವ ಎಲ್ಲಾ ನಿರ್ದೇಶನಗಳನ್ನು ಪಾಲಿಸತಕ್ಕದ್ದು.

(2) ಈ ಪ್ರಕರಣದಲ್ಲಿ "ಆಜ್ಞಾಪಕ ಸಂಚಾರ ಚಿಹ್ನೆ" ಎಂದರೆ ಮೊದಲನೇ ಅನುಸೂಚಿಯ 'ಎ' ಭಾಗದಲ್ಲಿರುವ ಒಂದು ಸಂಚಾರ ಚಿಹ್ನೆ ಅಥವಾ 4 ನೆಯ ಪ್ರಕರಣದ (1) ನೆಯ ಉಪ ಪ್ರಕರಣದ ಮೇರೆಗೆ ಮೋಟಾರು ವಾಹನ ಸಂಚಾರದ ಹೊರತಾದ ಇತರ ಸಂಚಾರವನ್ನು ನಿಯಂತ್ರಿಸುವ ಉದ್ದೇಶಕ್ಕಾಗಿ ನಿಲ್ಲಿಸಿದ ಅದೇ ರೀತಿಯ (ಎಂದರೆ, ವೃತ್ತಾಕಾರದ ಫಲಕವನ್ನು ಹೊಂದಿರುವ ಅಥವಾ ಒಳಗೊಂಡಿರುವ) ನಕ್ಷೆ, ಪದ ಅಥವಾ ಚಿತ್ರವನ್ನು ಹೊಂದಿರುವ ಮತ್ತು ತಳಭಾಗದಲ್ಲಿ ಅಥವಾ ಅಂಚಿನಲ್ಲಿ ಕೆಂಪಾಗಿರುವ ಅಥವಾ ರಸ್ತೆಯಲ್ಲಿ ಬಳಿದಿರುವ ಅಥವಾ ಗುರುತಿಸಿರುವ ಅಥವಾ ನಿಲ್ಲಿಸಿರುವ ಅಥವಾ ಪ್ರದರ್ಶಿಸಿರುವ ಯಾವುದೇ ನಿಯಮಿತ ಚಿಹ್ನೆ.

7. **ಸಂಕೇತಗಳು.–** ವಾಹನದ ಚಾಲಕನು ಮೂರನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಂದರ್ಭಗಳಲ್ಲಿ ಅದರಲ್ಲಿ ನಿರ್ದಿಷ್ಟಪಡಿಸಿದ ಸಂಕೇತಗಳನ್ನು ಮಾಡತಕ್ಕದ್ದು.

8. **ಅಪಾಯಕಾರಿ ಸ್ಥಿತಿಯಲ್ಲಿ ವಾಹನವನ್ನು ಅಥವಾ ಪ್ರಾಣಿಗಳನ್ನು ನಿಲ್ಲಿಸಿರುವುದು.–** ಒಂದು ವಾಹನದ ಅಥವಾ ಪ್ರಾಣಿಯ ಪ್ರಭಾರವನ್ನು ಹೊಂದಿರುವ ಯಾರೇ ವ್ಯಕ್ತಿಯು ಹೆದ್ದಾರಿಯನ್ನು ಅಥವಾ ಸಾರ್ವಜನಿಕ ಸ್ಥಳವನ್ನು ಬಳಸುವ ಇತರರಿಗೆ ಅಪಾಯ, ತಡೆ ಅಥವಾ ಅನುಚಿತ ಅನಾನುಕೂಲವು ಉಂಟಾಗುವಂಥ ಅಥವಾ ಉಂಟು ಮಾಡುವ ಸಂಭವವಿರುವ ಅಂಥ ಸ್ಥಿತಿಯಲ್ಲಿ ಅಥವಾ ಪರಿಸ್ಥಿತಿಯಲ್ಲಿ ಅಥವಾ ಸನ್ನಿವೇಶಗಳಲ್ಲಿ ವಾಹನ ಅಥವಾ ಪ್ರಾಣಿಯು ನಿಲ್ಲುವಂತೆ ಮಾಡತಕ್ಕದ್ದಲ್ಲ ಅಥವಾ ಹಾಗೆ ನಿಂತಿರಲು ಅವಕಾಶ ಕೊಡತಕ್ಕದ್ದಲ್ಲ.

9. **ಸೈಕಲ್ ಸವಾರಿ ಮಾಡುವ ವ್ಯಕ್ತಿಯನ್ನು ಎಳೆದುಕೊಂಡು ಹೋಗುವುದು.–** ಯಾರೇ ವಾಹನದ ಚಾಲಕನು, ಒಬ್ಬ ಸೈಕಲ್ ಸವಾರಿ ಮಾಡುವ ವ್ಯಕ್ತಿಯನ್ನು ಎಳೆದುಕೊಂಡು ಹೋಗತಕ್ಕದ್ದಲ್ಲ ಮತ್ತು ಸೈಕಲ್ ಸವಾರಿ ಮಾಡುವ ಯಾರೇ ವ್ಯಕ್ತಿಯು ಯಾವುದೇ ಇತರ ವಾಹನವು ತನ್ನನ್ನು ಎಳೆದುಕೊಂಡು ಹೋಗಲು ಅವಕಾಶ ನೀಡತಕ್ಕದ್ದಲ್ಲ.

10. **ವಾಹನ ಅಥವಾ ಪ್ರಾಣಿಯನ್ನು ನೋಡಿಕೊಳ್ಳುವವರಿಲ್ಲದೆ ಬಿಟ್ಟುಹೋಗುವುದು.–** ವಾಹನದ ಅಥವಾ ಪ್ರಾಣಿಯ ಸ್ವಾಧೀನವನ್ನು ಹೊಂದಿರುವ ವ್ಯಕ್ತಿಯು, ಅಂಥ ವಾಹನವು ಅಥವಾ ಪ್ರಾಣಿಯು ಸಾಕಷ್ಟು ನಿಯಂತ್ರಣದಲ್ಲಿದ್ದ ಹೊರತು, ಹೆದ್ದಾರಿಯಲ್ಲಿ ಅಥವಾ ಸಾರ್ವಜನಿಕ ಸ್ಥಳದಲ್ಲಿ ನಿಲ್ಲಲು ಅಥವಾ ಸಾಗಲು ಅವಕಾಶ ನೀಡತಕ್ಕದ್ದಲ್ಲ.

11. **ಕೆಲವು ಸಂದರ್ಭಗಳಲ್ಲಿ ನಿಲ್ಲಿಸುವುದು ಚಾಲಕನ ಕರ್ತವ್ಯವಾಗಿರುವುದು.–** (1) ವಾಹನದ ಅಥವಾ ಪ್ರಾಣಿಯ ಚಾಲಕನು , ಈ ಮುಂದಿನ ಸಂದರ್ಭಗಳಲ್ಲಿ, ಯುಕ್ತವಾಗಿ ಅವಶ್ಯಕವಾಗುವಷ್ಟು ಸಮಯ, ವಾಹನವನ್ನು ಅಥವಾ ಸಂದರ್ಭಾನುಸಾರ ಪ್ರಾಣಿಯನ್ನು ನಿಲ್ಲುವಂತೆ ಅಥವಾ ಅದೇ ಸ್ಥಳದಲ್ಲಿ ಇರುವಂತೆ ನೋಡಿಕೊಳ್ಳತಕ್ಕದ್ದು,–

(ಎ) ಸಮವಸ್ತ್ರದಲ್ಲಿರುವ ಯಾರೇ ಪೊಲೀಸ್ ಅಧಿಕಾರಿಯು ಹಾಗೆ ನಿಲ್ಲಿಸಬೇಕೆಂದು ಅಗತ್ಯಪಡಿಸಿದಲ್ಲಿ; ಅಥವಾ

(ಬಿ) ಒಬ್ಬ ವ್ಯಕ್ತಿಗೆ, ಪ್ರಾಣಿಗೆ ಅಥವಾ ವಾಹನಕ್ಕೆ ಆದ ಒಂದು ಅಪಘಾತದ ಘಟನೆಯಲ್ಲಿ ಅಥವಾ ಯಾವುದೇ ಸ್ವತ್ತಿಗೆ ಉಂಟಾದ ಹಾನಿಯಲ್ಲಿ, ವಾಹನವನ್ನು ನಡೆಸಿಕೊಂಡು ಹೋದದ್ದು ಅಥವಾ ಪ್ರಾಣಿಯನ್ನು ಹೊಡೆದುಕೊಂಡು ಹೋದದ್ದು ಅಥವಾ ಅದರ ನಿರ್ವಹಣೆಯು ಆ ಅಪಘಾತ ಅಥವಾ ಹಾನಿಗೆ ಕಾರಣವಾಗಿರಲಿ ಅಥವಾ ಆಗಿಲ್ಲದಿರಲಿ, ವಾಹನವು ಅಥವಾ ಪ್ರಾಣಿಯು ಒಳಗೊಂಡಿರುವಲ್ಲಿ ಮತ್ತು ಅವನು ತನ್ನ ಹೆಸರು ಮತ್ತು ವಿಳಾಸಗಳನ್ನು ಮತ್ತು ವಾಹನ ಅಥವಾ ಪ್ರಾಣಿಯ ಮಾಲೀಕನ ಹೆಸರು ಮತ್ತು ವಿಳಾಸಗಳನ್ನು ಬೇಕೆಂದು ಕೇಳುವ ಮತ್ತು ತನ್ನ ಹೆಸರು ಮತ್ತು ವಿಳಾಸಗಳನ್ನು ಒದಗಿಸುವ, ಆ ಅಪಘಾತದಿಂದ ಅಥವಾ ಹಾನಿಯಿಂದ ಬಾಧಿತನಾದ ಯಾವನೇ ವ್ಯಕ್ತಿಗೆ ಅವುಗಳನ್ನು ನೀಡತಕ್ಕದ್ದು.

(2) ಒಬ್ಬ ವ್ಯಕ್ತಿಯು, ವಾಹನದ ಅಥವಾ ಪ್ರಾಣಿಯ ಚಾಲಕನನ್ನು, ಅವನ ಹೆಸರು ಮತ್ತು ವಿಳಾಸಗಳನ್ನು ಕೊಡುವಂತೆ ಕೇಳಿದಾಗ ಮತ್ತು ಚಾಲಕನು 19 ನೆಯ ಪ್ರಕರಣದ ಅಡಿಯಲ್ಲಿ ಒಂದು ದಂಡನೀಯ ಅಪರಾಧವನ್ನು ಎಸಗಿದ್ದಾನೆಂದು ಆಪಾದಿಸಿದಾಗ, ಆ ವ್ಯಕ್ತಿಗೆ ತನ್ನ ಹೆಸರು ಮತ್ತು ವಿಳಾಸಗಳನ್ನು ಕೊಡತಕ್ಕದ್ದು.

12. **ಮಾಹಿತಿ ನೀಡುವುದು ವಾಹನದ ಅಥವಾ ಪ್ರಾಣಿಯ ಮಾಲೀಕನ ಕರ್ತವ್ಯವಾಗಿರುವುದು.–** ಯಾವೊಂದು ವಾಹನ ಅಥವಾ ಪ್ರಾಣಿಯ ಚಾಲಕನು ಈ ಅಧಿನಿಯಮದ ಅಡಿಯಲ್ಲಿ ಯಾವುದೇ ಅಪರಾಧದ ಬಗ್ಗೆ ಆಪಾದಿತನಾಗಿರುವನೋ ಆ ವಾಹನದ ಅಥವಾ ಪ್ರಾಣಿಯ ಮಾಲೀಕನು, ವಾಹನದ ಅಥವಾ ಪ್ರಾಣಿಯ ಚಾಲಕನ ಹೆಸರು ಮತ್ತು ವಿಳಾಸದ ಬಗ್ಗೆ ತನ್ನ ಬಳಿಯಿರುವ ಅಥವಾ ಯುಕ್ತ ಜಾಗರೂಕತೆಯಿಂದ ತಾನು ತಿಳಿದುಕೊಳ್ಳಬಹುದಾದ ಎಲ್ಲ ಮಾಹಿತಿಗಳನ್ನು ಯಾರೇ ಪೊಲೀಸ್ ಅಧಿಕಾರಿಯು ಕೇಳಿದಾಗ ಅವನಿಗೆ ಕೊಡತಕ್ಕದ್ದು.

**13. ವ್ಯಕ್ತಿಗೆ ಅಪಘಾತವಾದಾಗ ಮತ್ತು ಅವನಿಗೆ ಗಾಯ ಉಂಟಾದ ಸಂದರ್ಭದಲ್ಲಿ ಚಾಲಕನ ಕರ್ತವ್ಯ.–** ವಾಹನಕ್ಕೆ ಸಂಬಂಧಿಸಿದ ಒಂದು ಅಪಘಾತದಿಂದಾಗಿ ಯಾರೇ ವ್ಯಕ್ತಿಗೆ ಗಾಯ ಉಂಟಾದಾಗ ಅಥವಾ ಸ್ವತ್ತಿಗೆ ಇಪ್ಪತ್ತೈದು ರೂಪಾಯಿ ಅಥವಾ ಅದಕ್ಕಿಂತ ಹೆಚ್ಚು ಮೊತ್ತದ ಹಾನಿಯುಂಟಾದಾಗ, ಆ ವಾಹನದ ಚಾಲಕನು ಅಥವಾ ಅದರ ಪ್ರಭಾರವನ್ನು ಹೊಂದಿರುವ ಇತರ ವ್ಯಕ್ತಿಯು,–

(ಎ) ಹಾಗೆ ಗಾಯಗೊಂಡ ಯಾರೇ ವ್ಯಕ್ತಿಗೆ ವೈದ್ಯಕೀಯ ನೆರವು ಒದಗಿಸಲು ಯುಕ್ತವಾದ ಎಲ್ಲ ಕ್ರಮಗಳನ್ನು ಕೈಗೊಳ್ಳತಕ್ಕದ್ದು ಮತ್ತು ಅವಶ್ಯವಿದ್ದಲ್ಲಿ, ಗಾಯಗೊಂಡ ವ್ಯಕ್ತಿಯು ಅಥವಾ ಅವನು ಅಪ್ರಾಪ್ತ ವಯಸ್ಕನಾಗಿದ್ದಲ್ಲಿ ಅವನ ಪಾಲಕನು ಅನ್ಯಥಾ ಅಪೇಕ್ಷಿಸಿದ ಹೊರತು, ಚಾಲಕನು ಆ ವ್ಯಕ್ತಿಯನ್ನು ತೀರ ಹತ್ತಿರದ ಆಸ್ಪತ್ರೆಗೆ ಸಾಗಿಸತಕ್ಕದ್ದು;

(ಬಿ) ಒಬ್ಬ ಪೊಲೀಸ್ ಅಧಿಕಾರಿಯು ಅಗತ್ಯಪಡಿಸಿದಾಗ ಆತನಿಗೆ ಬೇಕಾದ ಯಾವುದೇ ಮಾಹಿತಿಗಳನ್ನು ಕೊಡತಕ್ಕದ್ದು ಅಥವಾ ಯಾರೇ ಪೊಲೀಸ್ ಅಧಿಕಾರಿಯು ಅಥವಾ ಇತರ ಪ್ರಾಧಿಕಾರಿಯು ಹಾಜರಿರದಿದ್ದರೆ, ಘಟನೆಯ ಸನ್ನಿವೇಶಗಳನ್ನು ಸಾಧ್ಯವಾದಷ್ಟು ಬೇಗನೆ ಮತ್ತು ಯಾವುದೇ ಸಂದರ್ಭದಲ್ಲಿ ಘಟನೆ ನಡೆದ ಇಪ್ಪತ್ತನಾಲ್ಕು ಗಂಟೆಗಳೊಳಗಾಗಿ, ತೀರ ಹತ್ತಿರದ ಪೊಲೀಸ್ ಠಾಣೆಗೆ ಅಥವಾ ಘಟನೆಯ ತರುವಾಯ ಅವನು ತನ್ನ ಪ್ರಯಾಣವನ್ನು ಮುಂದುವರಿಸಿದರೆ ಮುಂದಿನ ಪೊಲೀಸ್ ಠಾಣೆಗೆ ವರದಿ ಮಾಡತಕ್ಕದ್ದು.

**14. ಸಂಚಾರ ನಿಯಂತ್ರಣಕ್ಕಾಗಿ ನಿಯಮ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಪೂರ್ವ ಪ್ರಕಟಣೆಯ ತರುವಾಯ, ಈ ಅಧ್ಯಾಯದ ಉಪಬಂಧಗಳನ್ನು ಕಾರ್ಯಗತಗೊಳಿಸುವ ಉದ್ದೇಶಕ್ಕಾಗಿ ನಿಯಮಗಳನ್ನು ರಚಿಸಬಹುದು, ಮತ್ತು ರಾಜ್ಯದ ಬೇರೆ ಬೇರೆ ಪ್ರದೇಶಗಳಿಗಾಗಿ ಬೇರೆ ಬೇರೆ ನಿಯಮಗಳನ್ನು ರಚಿಸಬಹುದು.

(2) ಮೇಲೆ ಹೇಳಿದ ಅಧಿಕಾರದ ಸಾಮಾನ್ಯತೆಗೆ ಬಾಧಕವಾಗದಂತೆ, ಅಂಥ ನಿಯಮಗಳು ಈ ಮುಂದಿನ ವಿಷಯಗಳ ಬಗ್ಗೆ ಉಪಬಂಧಿಸಬಹುದು,–

(ಎ) ಕೆಟ್ಟು ಹೋಗಿರುವ ಅಥವಾ ಹಾಗೆಯೇ ಹೆದ್ದಾರಿಯ ಮೇಲೆ ನಿಲ್ಲಿಸಿ ಹೋಗಿರುವ ಅಥವಾ ಬಿಟ್ಟು ಹೋಗಿರುವ ವಾಹನಗಳನ್ನು, ಅವುಗಳಲ್ಲಿ ತುಂಬಿಸಿರುವ ಹೇರುಗಳೂ ಸೇರಿದಂತೆ ಅಲ್ಲಿಂದ ಬೇರೆ ಸ್ಥಳಕ್ಕೆ ಸಾಗಿಸುವುದು ಮತ್ತು ಅವುಗಳ ಸುರಕ್ಷಿತ ಅಭಿರಕ್ಷೆ;

(ಬಿ) ತೂಕ ಮಾಡುವ ಸಾಧನಗಳ ಬಳಕೆ ;

(ಸಿ) ವಾಹನಗಳ ಮತ್ತು ಪ್ರಾಣಿಗಳ ಬಳಕೆಗಾಗಿ ನಿಲುಗಡೆ ಸ್ಥಳಗಳ ನಿರ್ಧರಣೆ, ನಿರ್ವಹಣೆ ಮತ್ತು ವ್ಯವಸ್ಥಾಪನೆ ಮತ್ತು ಅವುಗಳ ಬಳಕೆಗೆ ವಿಧಿಸಬಹುದಾದ ಫೀಜು ಯಾವುದಾದರೂ ಇದ್ದರೆ, ಅದು;

(ಡಿ) ವಾಹನಗಳು ಅಥವಾ ಪ್ರಾಣಿಗಳು ಕಾಲುದಾರಿಗಳನ್ನು ಅಥವಾ ನೆಲಗಟ್ಟಿನ ದಾರಿಗಳನ್ನು ಬಳಸದಂತೆ ನಿಷೇಧಿಸುವುದು;

(ಇ) ನಿರ್ದಿಷ್ಟಪಡಿಸಿದ ಷರತ್ತುಗಳಿಗೊಳಪಟ್ಟು, ನಿರ್ದಿಷ್ಟವರ್ಗದ ಅಥವಾ ವಿವರಣೆಯ ವಾಹನ ಅಥವಾ ಪ್ರಾಣಿಗಳ ಸಂಚಾರವನ್ನು ಹೆದ್ದಾರಿಯ ಯಾವುದೇ ನಿರ್ದಿಷ್ಟ ಭಾಗಕ್ಕೆ ಪ್ರತ್ಯೇಕಿಸುವುದು;

(ಎಫ್) ನಿಶ್ಚಿತ ಸಮಯಗಳಲ್ಲಿ ಅಥವಾ ನಿಶ್ಚಿತ ಸ್ಥಳಗಳಲ್ಲಿ ಶ್ರವಣ ಸಂಕೇತಗಳ ಉಪಯೋಗವನ್ನು ನಿಷೇಧಿಸುವುದು ಅಥವಾ ನಿರ್ಬಂಧಿಸುವುದು;

(ಜಿ) ವಾಹನಗಳ ಹೇರನ್ನು ನಿಯಂತ್ರಿಸುವುದು ಮತ್ತು ನಿರ್ದಿಷ್ಟವಾಗಿ ಜೋಡಿಸಲಾದ ಟೈರುಗಳ ಗಾತ್ರ ಮತ್ತು ಸ್ವರೂಪಕ್ಕೆ ಸಂಬಂಧಿಸಿದಂತೆ ಒಯ್ಯಲಾಗುವ ಹೇರುಗಳನ್ನು ಮಿತಿಗೊಳಿಸುವುದು;

(ಎಚ್) ಆ್ಯಂಬುಲೆನ್ಸ್ ಗಳು ಮತ್ತು ಅಗ್ನಿಶಾಮಕ ದಳದ ವಾಹನಗಳಿಗೆ ದಾರಿಯ ಹಕ್ಕು;

(ಐ) ವಾಹನದ ಯಾವುದೇ ಚಕ್ರದ ಭ್ರಮಣವನ್ನು ಪ್ರತಿಬಂಧಿಸಲು ವಿನ್ಯಾಸಗೊಳಿಸಲಾದ ಸಾಧನಗಳನ್ನು ಉಪಯೋಗಿಸುವುದನ್ನು ನಿಷೇಧಿಸುವುದು;

(ಜೆ) ಇತರ ಪ್ರಾಣಿಗಳನ್ನು ಅಥವಾ ಪಾದಚಾರಿಗಳನ್ನು ಹೆದರಿಸುವ ಸಾಧ್ಯತೆಯಿರುವ ಪ್ರಾಣಿಗಳ ನಿಯಂತ್ರಣ;

(ಕೆ) ಹೆದ್ದಾರಿಗಳ ಮೇಲೆ ಮಕ್ಕಳನ್ನು ನಿಯಂತ್ರಿಸುವುದು;

(ಎಲ್) [1][ಇಬ್ಬರಿಗಿಂತ][1] ಹೆಚ್ಚು ವ್ಯಕ್ತಿಗಳು ಸವಾರಿ ಮಾಡುವ ಉದ್ದೇಶಕ್ಕಾಗಿ ವಿನ್ಯಾಸಗೊಳಿಸಲಾದ ಸೈಕಲ್‌ಗಳ ಹೊರತಾಗಿ, ಇತರ ಸೈಕಲ್‌ಗಳಲ್ಲಿ ಏಕ ಕಾಲದಲ್ಲಿ, [1][ಇಬ್ಬರಿಗಿಂತ][1] ಹೆಚ್ಚು ವ್ಯಕ್ತಿಗಳು ಸವಾರಿ ಮಾಡುವುದನ್ನು ನಿಷೇಧಿಸುವುದು;

**1. 1986ರ ಅಧಿನಿಯಮ ಸಂಖ್ಯೆ 25 ರ ಮೂಲಕ 28.5.1986 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.**

(ಎಂ) ಎರಡಕ್ಕಿಂತ ಹೆಚ್ಚು ಸೈಕಲ್‌ಗಳು ಪಕ್ಕ ಪಕ್ಕದಲ್ಲಿ ಹೋಗುವುದನ್ನು ನಿಷೇಧಿಸುವುದು;

(ಎನ್) ವಾಹನಗಳ ಚಾಲಕರ ವಯಸ್ಸನ್ನು ಮಿತಿಗೊಳಿಸುವುದು;

(ಒ) ವಾಹನಗಳ ಮೇಲೆ ಮತ್ತು ಪ್ರಾಣಿಗಳ ಮೇಲೆ ಒಯ್ಯಲಾಗುವ ಹೇರುಗಳ ಪರಿಶೀಲನೆ;

(ಪಿ) ಪ್ರಾಣಿಗಳಿಗಾಗಿ ಮೂಗು ದಾರಗಳ ಬಳಕೆ;

(ಕ್ಯೂ) ರಾತ್ರಿಯಲ್ಲಿ ವಾಹನಗಳನ್ನು ನಡೆಸುವುದನ್ನು ಮತ್ತು ಪ್ರಾಣಿಗಳನ್ನು ಹೊಡೆದುಕೊಂಡು ಹೋಗುವುದನ್ನು ನಿಯಂತ್ರಿಸುವುದು;

(ಆರ್) ಪಾದಚಾರಿಗಳು ಹೆದ್ದಾರಿಗಳನ್ನು ಬಳಸುವುದನ್ನು ನಿಯಂತ್ರಿಸುವುದು;

(ಎಸ್) ಸಾಮಾನ್ಯವಾಗಿ, ಸಾರ್ವಜನಿಕರಿಗೆ ಅಥವಾ ಯಾರೇ ವ್ಯಕ್ತಿಗೆ ಅಪಾಯ, ಗಾಯ ಅಥವಾ ಕಿರುಕುಳ ಉಂಟಾಗದಂತೆ ಅಥವಾ ಸ್ವತ್ತಿಗೆ ಅಪಾಯ, ಹಾನಿ ಆಗದಂತೆ ಅಥವಾ ಸಂಚಾರಕ್ಕೆ ಅಡಚಣೆ ಉಂಟಾಗದಂತೆ ತಡೆಯುವುದು;

(ಟಿ) ನಿಯಮಿಸಲಾಗುವ ಅಥವಾ ನಿಯಮಿಸಬಹುದಾದ ಇತರ ಯಾವುದೇ ವಿಷಯ.

(3) ಈ ಪ್ರಕರಣದ ಅಡಿಯಲ್ಲಿ ರಚಿಸಲಾದ ನಿಯಮಗಳು, ಅಂಥ ನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು ಮತ್ತು ಅಂಥ ದಿನಾಂಕವು, ರಾಜ್ಯಪತ್ರದಲ್ಲಿ ಅಂಥ ನಿಯಮಗಳ ಪ್ರಕಟಣೆಯ ದಿನಾಂಕದಿಂದ ಒಂದು ತಿಂಗಳಿಗಿಂತ ಮುಂಚಿನ ದಿನಾಂಕವಾಗಿರತಕ್ಕದ್ದಲ್ಲ.

## ಅಧ್ಯಾಯ–III

## ವಾಹನಗಳ ನಿರ್ಮಾಣ, ಸಲಕರಣೆ ಮತ್ತು ನಿರ್ವಹಣೆ

15. **ರಚನೆ ಮತ್ತು ನಿರ್ವಹಣೆಗೆ ಸಂಬಂಧಿಸಿದಂತೆ ಸಾಮಾನ್ಯ ಉಪಬಂಧ.–** ಹೆದ್ದಾರಿಯ ಮೇಲೆ ಬಳಸಲಾಗುವ ಪ್ರತಿಯೊಂದು ವಾಹನವನ್ನು, ಆ ವಾಹನವನ್ನು ಬಳಸುವ ವ್ಯಕ್ತಿಗಳಿಗೆ ಮತ್ತು ಇತರ ರಸ್ತೆ ಬಳಕೆದಾರರಿಗೆ ಉಂಟಾಗಬಹುದಾದ ಅಪಾಯವನ್ನು ಅಥವಾ ಅನಾನುಕೂಲತೆಯನ್ನು ನಿವಾರಿಸುವಂತೆ ನಿರ್ಮಿಸಿರತಕ್ಕದ್ದು ಮತ್ತು ನಿರ್ವಹಿಸಿರತಕ್ಕದ್ದು.

16. **ವಾಹನಗಳ ನಿರ್ಮಾಣ, ಸಲಕರಣೆ ಮತ್ತು ನಿರ್ವಹಣೆಗಾಗಿ ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಪೂರ್ವ ಪ್ರಕಟಣೆಯ ತರುವಾಯ, ಹೆದ್ದಾರಿಗಳಲ್ಲಿ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಬಳಸುವ ವಾಹನಗಳ ನಿರ್ಮಾಣ, ಸಲಕರಣೆ ಮತ್ತು ನಿರ್ವಹಣೆಯನ್ನು ನಿಯಂತ್ರಿಸುವ ನಿಯಮಗಳನ್ನು ರಚಿಸಬಹುದು ಮತ್ತು ರಾಜ್ಯದ ಬೇರೆ ಬೇರೆ ಪ್ರದೇಶಗಳಿಗಾಗಿ ಬೇರೆ ಬೇರೆ ನಿಯಮಗಳನ್ನು ರಚಿಸಬಹುದು.

(2) ಮೇಲೆ ಹೇಳಿದ ಅಧಿಕಾರದ ಸಾಮಾನ್ಯತೆಗೆ ಬಾಧಕವಾಗದಂತೆ, ವಾಹನಗಳ ಸಂಬಂಧದಲ್ಲಿಯಾಗಲಿ ಅಥವಾ ನಿರ್ದಿಷ್ಟ ವರ್ಗದ ಅಥವಾ ವಿವರಣೆಯ ವಾಹನಗಳ ಸಂಬಂಧದಲ್ಲಿಯಾಗಲಿ ಅಥವಾ ನಿರ್ದಿಷ್ಟ ಸಂದರ್ಭದಲ್ಲಿಯಾಗಲಿ ಈ ಮುಂದಿನ ವಿಷಯಗಳಲ್ಲಿ ಯಾವುದೇ ಒಂದು ವಿಷಯವನ್ನು ನಿಯಂತ್ರಿಸುವ ನಿಯಮಗಳನ್ನು ಈ ಪ್ರಕರಣದ ಅಡಿಯಲ್ಲಿ ರಚಿಸಬಹುದು, ಎಂದರೆ:–

(ಎ) ವಾಹನಗಳ ಅಗಲ, ಎತ್ತರ ಮತ್ತು ಉದ್ದ;

(ಬಿ) ಚಕ್ರಗಳು ಮತ್ತು ಟೈರುಗಳ ಗಾತ್ರ, ಸ್ವರೂಪ ಮತ್ತು ಸ್ಥಿತಿ;

(ಸಿ) ಬ್ರೇಕುಗಳು;

(ಡಿ) ದೀಪಗಳು ಮತ್ತು ಪ್ರತಿಫಲಕಗಳು;

(ಇ) ಎಚ್ಚರಿಕೆಯ ಸಾಧನಗಳು;

(ಎಫ್) ನಿಯಮಿತ ಪ್ರಾಧಿಕಾರಿಗಳಿಂದ ವಾಹನಗಳ ತಪಾಸಣೆ ;

(ಜಿ) ವಾಹನಗಳ ಮೇಲೆ ಪ್ರದರ್ಶಿಸಲಾದ ವಿವರಗಳನ್ನು ಮತ್ತು ಅಂಥ ವಿವರಗಳನ್ನು ಪ್ರದರ್ಶಿಸತಕ್ಕ ರೀತಿಯನ್ನು ನಿಯಂತ್ರಿಸುವುದು.

## ಅಧ್ಯಾಯ–IV

## ಸಾರ್ವಜನಿಕ ವಾಹನಗಳ ನಿಯಂತ್ರಣ

17. **ಸಾರ್ವಜನಿಕ ವಾಹನಗಳ ನಿಯಂತ್ರಣಕ್ಕಾಗಿ ನಿಯಮ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಅಧಿಸೂಚನೆ ಮೂಲಕ, ಪೂರ್ವ ಪ್ರಕಟಣೆಯ ತರುವಾಯ, ಸಾರ್ವಜನಿಕ ವಾಹನಗಳ ಬಳಕೆಯನ್ನು ನಿಯಂತ್ರಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು ಮತ್ತು ರಾಜ್ಯದ ಬೇರೆ ಬೇರೆ ಪ್ರದೇಶಗಳಿಗಾಗಿ ಬೇರೆ ಬೇರೆ ನಿಯಮಗಳನ್ನು ರಚಿಸಬಹುದು.

(2) ಮೇಲೆ ಹೇಳಿದ ಅಧಿಕಾರದ ಸಾಮಾನ್ಯತೆಗೆ ಬಾಧಕವಾಗದಂತೆ, ಸಾಮಾನ್ಯವಾಗಿಯಾಗಲಿ ಅಥವಾ ನಿರ್ದಿಷ್ಟ ವರ್ಗದ ಅಥವಾ ವಿವರಣೆಯ ಸಾರ್ವಜನಿಕ ವಾಹನಗಳ ಸಂಬಂಧದಲ್ಲಿಯಾಗಲಿ ಅಥವಾ ನಿರ್ದಿಷ್ಟ ಸಂದರ್ಭದಲ್ಲಿಯಾಗಲಿ ಈ ಮುಂದಿನ ವಿಷಯಗಳಲ್ಲಿ ಯಾವುದೇ ಒಂದು ವಿಷಯವನ್ನು ನಿಯಂತ್ರಿಸುವ ನಿಯಮಗಳನ್ನು ಈ ಪ್ರಕರಣದ ಅಡಿಯಲ್ಲಿ ರಚಿಸಬಹುದು, ಎಂದರೆ:–

(ಎ) ಅನುಮತಿ ಪತ್ರಗಳನ್ನು ನೀಡುವುದು, ನವೀಕರಿಸುವುದು, ಮಾರ್ಪಾಟು ಮಾಡುವುದು ಅಥವಾ ರದ್ದುಗೊಳಿಸುವುದು ಮತ್ತು ಒಬ್ಬ ವ್ಯಕ್ತಿಯಿಂದ ಇನ್ನೊಬ್ಬ ವ್ಯಕ್ತಿಗೆ ಪರವಾನಿಗೆಗಳನ್ನು ವರ್ಗಾವಣೆ ಮಾಡುವುದು;

(ಬಿ) ಡ್ರೈವಿಂಗ್ ಲೈಸೆನ್ಸುಗಳನ್ನು ನೀಡುವುದು, ನವೀಕರಿಸುವುದು ಅಥವಾ ರದ್ದುಗೊಳಿಸುವುದು;

(ಸಿ) ಹರಿದುಹೋದ, ವಿರೂಪಗೊಂಡ, ಕಳೆದುಹೋದ ಅಥವಾ ನಾಶವಾದ ಅನುಮತಿ ಪತ್ರಗಳಿಗೆ ಮತ್ತು ಚಾಲನ ಲೈಸೆನ್ಸುಗಳಿಗೆ ಬದಲಾಗಿ ದ್ವಿಪ್ರತಿಗಳನ್ನು ಕೊಡುವುದು;

(ಡಿ) ಅನುಮತಿ ಪತ್ರವನ್ನು ಅಥವಾ ಚಾಲನಾ ಲೈಸೆನ್ಸನ್ನು ಮಂಜೂರು ಮಾಡಲು ಅಥವಾ ನವೀಕರಿಸಲು ಅಥವಾ ಅನುಮತಿಪತ್ರವನ್ನು ವರ್ಗಾಯಿಸಲು ಸಕ್ಷಮ ಪ್ರಾಧಿಕಾರಿಯ ನಿರಾಕರಣೆಯಿಂದ ಅಥವಾ ಅನುಮತಿ ಪತ್ರದ ರದ್ದಿಯಾತಿ ಅಥವಾ ಮಾರ್ಪಾಟಿನಿಂದ ಅಥವಾ ಚಾಲನಾ ಲೈಸೆನ್ಸಿನ ರದ್ದಿಯಾತಿಯಿಂದ ಬಾಧಿತರಾದ ವ್ಯಕ್ತಿಗಳು ಅಪೀಲು ಹೂಡುವುದು ಮತ್ತು ವಿಚಾರಣೆ ಮಾಡುವುದು ಮತ್ತು ಅಂಥ ಅಪೀಲುಗಳನ್ನು ನಿರ್ವಹಿಸುವುದು;

(ಇ) ಸಾರ್ವಜನಿಕ ವಾಹನಗಳ ದಸ್ತಾವೇಜುಗಳು, ಫಲಕಗಳು ಮತ್ತು ಚಿಹ್ನೆಗಳು ಮತ್ತು ಅವುಗಳನ್ನು ಇಡತಕ್ಕ ರೀತಿ ಮತ್ತು ಅಂಥ ದಸ್ತಾವೇಜುಗಳು ಅಭಿವ್ಯಕ್ತಗೊಳ್ಳಬೇಕಾದ ಭಾಷೆ;

(ಎಫ್) ಚಾಲಕರು ಧರಿಸಬೇಕಾದ ಬಿಲ್ಲೆಗಳು ಮತ್ತು ಸಮವಸ್ತ್ರಗಳು;

(ಜಿ) ಅನುಮತಿ ಪತ್ರಗಳು, ಚಾಲನಾ ಲೈಸೆನ್ಸುಗಳು, ಅನುಮತಿ ಪತ್ರಗಳ ಅಥವಾ ಚಾಲನಾ ಲೈಸೆನ್ಸುಗಳ ನಕಲು ಪ್ರತಿಗಳು, ಫಲಕಗಳು, ವಿಶಿಷ್ಟ ಚಿಹ್ನೆಗಳು – ಇವುಗಳ ಸಂಬಂಧದಲ್ಲಿ ಮತ್ತು ಈ ಅಧ್ಯಾಯದ ಅಡಿಯಲ್ಲಿ ಹೂಡಿದ ಅಪೀಲುಗಳ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಫೀಜುಗಳು;

(ಎಚ್) ತಪಾಸಣೆಯ ಉದ್ದೇಶಕ್ಕಾಗಿ ನಿರ್ದಿಷ್ಟ ಅಧಿಕಾರಿಗಳ ಮುಂದೆ ಅನುಮತಿ ಪತ್ರಗಳನ್ನು ಮತ್ತು ಚಾಲನಾ ಲೈಸೆನ್ಸುಗಳನ್ನು ಹಾಜರುಪಡಿಸುವುದು;

(ಐ) ಸಾರ್ವಜನಿಕ ವಾಹನಗಳ ಚಾಲಕರಾಗಿ ಕಾರ್ಯನಿರ್ವಹಿಸಲು ಲೈಸೆನ್ಸು ಪಡೆದ ವ್ಯಕ್ತಿಗಳು ಹಾಗೆ ಕಾರ್ಯ ನಿರ್ವಹಿಸುವಾಗ ಅವರ ನಡತೆ ಮತ್ತು ಅಂಥ ವಾಹನಗಳಲ್ಲಿನ ಪ್ರಯಾಣಿಕರ ನಡತೆ;

(ಜೆ) ಯಾವುದೇ ನಿರ್ದಿಷ್ಟ ಪ್ರದೇಶಕ್ಕೆ ಅಥವಾ ಯಾವುದೇ ನಿರ್ದಿಷ್ಟ ಮಾರ್ಗ ಅಥವಾ ಮಾರ್ಗಗಳಿಗೆ ಸಂಬಂಧಿಸಿ ಅನುಮತಿ ಪತ್ರಗಳನ್ನು ಮಂಜೂರು ಮಾಡಬಹುದಾದಂಥ ಸಾರ್ವಜನಿಕ ವಾಹನಗಳ ಅಥವಾ ಯಾವುದೇ ನಿರ್ದಿಷ್ಟ ವರ್ಗದ ಅಥವಾ ವಿವರಣೆಯ ಸಾರ್ವಜನಿಕ ವಾಹನಗಳ ಸಂಖ್ಯೆಯನ್ನು ಮಿತಿಗೊಳಿಸುವುದು;

(ಕೆ) ಗರಿಷ್ಠ ಅಥವಾ ಕನಿಷ್ಠ ಪ್ರಯಾಣ ದರ ಅಥವಾ ಸಾಗಣೆ ಬಾಡಿಗೆಯನ್ನು ಗೊತ್ತುಪಡಿಸುವುದು;

(ಎಲ್) ಸಾರ್ವಜನಿಕ ವಾಹನದಲ್ಲಿ ಒಯ್ಯಬಹುದಾದ ಪ್ರಯಾಣಿಕರ ಗರಿಷ್ಠ ಸಂಖ್ಯೆ ಅಥವಾ ಸರಕುಗಳ ಗರಿಷ್ಠ ಪರಿಮಾಣ;

(ಎಂ) ಯಾವ ಷರತ್ತುಗಳಿಗೆ ಒಳಪಟ್ಟು ಸಾರ್ವಜನಿಕ ವಾಹನಗಳಲ್ಲಿ ಪ್ರಯಾಣಿಕರು, ತಮ್ಮೊಂದಿಗೆ ಒಯ್ಯಬೇಕಾದ ಗಂಟು ಮೂಟೆಗಳನ್ನು ಒಯ್ಯಬಹುದೋ ಆ ಷರತ್ತುಗಳು;

(ಎನ್) ಸಾಮಾನ್ಯವಾಗಿಯಾಗಲಿ ಅಥವಾ ನಿರ್ದಿಷ್ಟ ಪ್ರದೇಶಗಳಲ್ಲಿಯಾಗಲಿ ಅಥವಾ ನಿರ್ದಿಷ್ಟ ಮಾರ್ಗಗಳಲ್ಲಿಯಾಗಲಿ ಸಂಚರಿಸುವ ಸಾರ್ವಜನಿಕ ವಾಹನಗಳ ರಚನೆ ಮತ್ತು ಜೋಡಣೆಗಳು ಮತ್ತು ಅವುಗಳಲ್ಲಿ ಒಯ್ಯಬೇಕಾದ ಸಾಧನ ಸಾಮಗ್ರಿಗಳು;

(ಒ) ಸಾರ್ವಜನಿಕ ವಾಹನಗಳಲ್ಲಿ ಬಿಟ್ಟುಹೋದ ಸ್ವತ್ತಿನ ಸುರಕ್ಷಿತ ಅಭಿರಕ್ಷೆ ಮತ್ತು ಅದರ ವಿಲೇವಾರಿ;

(ಪಿ) ಹೆಣಗಳನ್ನು ಅಥವಾ ಸೋಂಕು ಅಥವಾ ಅಂಟು ರೋಗಗಳಿಂದ ನರಳುತ್ತಿರುವ ವ್ಯಕ್ತಿಗಳನ್ನು ಅಥವಾ ಪ್ರಯಾಣಿಕರಿಗೆ ಅನಾನುಕೂಲವುಂಟು ಮಾಡುವ ಅಥವಾ ಹಾನಿಯನ್ನುಂಟು ಮಾಡುವಂಥ ಸರಕುಗಳನ್ನು ಸಾರ್ವಜನಿಕ ವಾಹನಗಳಲ್ಲಿ ಒಯ್ಯುವುದು ಮತ್ತು ಅಂಥ ಉದ್ದೇಶಗಳಿಗಾಗಿ ವಾಹನಗಳನ್ನು ಉಪಯೋಗಿಸಿದ್ದಾಗ, ಅಂಥ ವಾಹನಗಳ ಪರಿಶೀಲನೆ ಮತ್ತು ಸೋಂಕು ನಾಶ;

(ಕ್ಯೂ) ಯಾವುದೇ ನಿಲ್ದಾಣದ ಅಥವಾ ನಿಲ್ಲಿಸುವ ಸ್ಥಳದ ನಿರ್ಮಾಣದಲ್ಲಿ ಅಥವಾ ಬಳಕೆಯಲ್ಲಿ ಪಾಲಿಸಬೇಕಾದ ಅಗತ್ಯತೆಗಳು ಮತ್ತು ಅವುಗಳ ಎಲ್ಲಾ ಬಳಕೆದಾರರ ಅನುಕೂಲಕ್ಕಾಗಿ ಸಾಕಷ್ಟು ಸಾಧನ ಸಾಮಗ್ರಿ ಮತ್ತು ಸೌಕರ್ಯಗಳ ವ್ಯವಸ್ಥೆಯೂ ಒಳಗೊಂಡು, ಅಂಥ ಸೌಕರ್ಯಗಳ ಉಪಯೋಗಕ್ಕಾಗಿ ವಿಧಿಸಬಹುದಾದ ಫೀಜುಗಳೇನಾದರೂ ಇದ್ದರೆ, ಅಂಥ ಫೀಜುಗಳು, ಅಂಥ ನಿಲ್ದಾಣ ಅಥವಾ ಸ್ಥಳಗಳಲ್ಲಿ ಇಟ್ಟುಕೊಂಡು ಬರಬೇಕಾದ ದಾಖಲೆಗಳು, ಅಲ್ಲಿ ನಿಯೋಜಿಸಬೇಕಾದ ಸಿಬ್ಬಂದಿ ಮತ್ತು ಅಂಥ ಸಿಬ್ಬಂದಿಯ ಕರ್ತವ್ಯಗಳು ಮತ್ತು ನಡತೆ, ಸಾಮಾನ್ಯವಾಗಿ ಅಂಥ ನಿಲ್ದಾಣಗಳನ್ನು ಮತ್ತು ಸ್ಥಳಗಳನ್ನು ಬಳಕೆಯೋಗ್ಯ ಮತ್ತು ಚೊಕ್ಕಟ ಸ್ಥಿತಿಯಲ್ಲಿ ನಿರ್ವಹಿಸುವುದಕ್ಕೆ ಸಂಬಂಧಪಟ್ಟಂತೆ ;

(ಆರ್) ಕಾನೂನು ಸಮ್ಮತ ಅಥವಾ ವಾಡಿಕೆಯ ಪ್ರಯಾಣ ದರವನ್ನು ಸಲ್ಲಿಸುವ ಯಾರೇ ವ್ಯಕ್ತಿಯನ್ನು ಒಯ್ಯುವಂತೆ ಸಾರ್ವಜನಿಕ ವಾಹನದ ಪ್ರಭಾರವನ್ನು ಹೊಂದಿರುವ ವ್ಯಕ್ತಿಯನ್ನು ಅಗತ್ಯಪಡಿಸುವುದು;

(ಎಸ್) ವಾಹನಗಳನ್ನು ಎಳೆಯಲು ಉಪಯೋಗಿಸಲಾಗುವ ಪ್ರಾಣಿಗಳೂ ಸೇರಿದಂತೆ ಸಾರ್ವಜನಿಕ ವಾಹನಗಳ ತಪಾಸಣೆ;

(ಟಿ) ಸಾರ್ವಜನಿಕ ವಾಹನಗಳ ಮಾಲೀಕರು ಇಟ್ಟುಕೊಂಡು ಬರಬೇಕಾದ ದಾಖಲೆಗಳು ಮತ್ತು ಒದಗಿಸಬೇಕಾದ ವಿವರ ಪಟ್ಟಿಕೆಗಳು ;

(ಯು) ಈ ಅಧ್ಯಾಯದ ಉಪಬಂಧಗಳ ನಿರ್ವಹಣೆಯ ಉದ್ದೇಶಕ್ಕಾಗಿ, ಅಗತ್ಯವಿರುವ ಪ್ರಾಧಿಕಾರಿಗಳ ನೇಮಕಾತಿ, ನೇಮಕಾತಿಯ ನಿಬಂಧನೆಗಳು, ಅಧಿಕಾರ ವ್ಯಾಪ್ತಿ, ನಿಯಂತ್ರಣ ಮತ್ತು ಪ್ರಕಾರ್ಯಗಳು; ಮತ್ತು

(ವಿ) ನಿಯಮಿಸಬೇಕಾದ ಅಥವಾ ನಿಯಮಿಸಬಹುದಾದ ಇತರ ಯಾವುದೇ ವಿಷಯ.

(3) ಈ ಪ್ರಕರಣದ ಅಡಿಯಲ್ಲಿ ರಚಿಸಲಾದ ನಿಯಮಗಳು, ಅಂಥ ನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು ಮತ್ತು ಅಂಥ ದಿನಾಂಕವು ರಾಜ್ಯಪತ್ರದಲ್ಲಿ ಅಂಥ ನಿಯಮಗಳ ಪ್ರಕಟಣೆಯ ದಿನಾಂಕದಿಂದ ಒಂದು ತಿಂಗಳಿಗಿಂತ ಮುಂಚಿನ ದಿನಾಂಕವಾಗಿರತಕ್ಕದ್ದಲ್ಲ.

## ಅಧ್ಯಾಯ–V

## ಸಂಕೀರ್ಣ

18. **ಅಪರಾಧಗಳ ದಂಡನೆಯ ಸಂಬಂಧದ ಸಾಮಾನ್ಯ ಉಪಬಂಧ.–** ಈ ಅಧಿನಿಯಮದ ಯಾವುದೇ ಉಪಬಂಧವನ್ನು ಅಥವಾ ಅದರ ಅಡಿಯಲ್ಲಿ ರಚಿಸಿದ ಯಾವುದೇ ನಿಯಮವನ್ನು ಉಲ್ಲಂಘಿಸಿದ ವ್ಯಕ್ತಿಯು, ಆ ಅಪರಾಧಕ್ಕೆ ಇತರ ಯಾವುದೇ ದಂಡನೆಯನ್ನು ಉಪಬಂಧಿಸಿರದಿದ್ದರೆ, ಅಪರಾಧ ನಿರ್ಣಯದ ತರುವಾಯ ಹತ್ತು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವನು ಈ ಅಧಿನಿಯಮದ ಅಡಿಯಲ್ಲಿನ ಯಾವುದೇ ಅಪರಾಧಕ್ಕಾಗಿ ಹಿಂದೆ ಅಪರಾಧಿಯೆಂದು ನಿರ್ಣೀತನಾಗಿದ್ದು, ಮತ್ತೆ ಈ ಅಧಿನಿಯಮದ ಅಡಿಯಲ್ಲಿನ ಅಪರಾಧಕ್ಕಾಗಿ ಅಪರಾಧಿಯೆಂದು ನಿರ್ಣೀತನಾದರೆ ಐವತ್ತು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕದ್ದು.

19. **ವಾಹನವನ್ನು ನಿರ್ಲಕ್ಷ್ಯದಿಂದ ಅಥವಾ ಅಪಾಯಕರ ರೀತಿಯಲ್ಲಿ ನಡೆಸುವುದು.–** ಯಾರೇ ವ್ಯಕ್ತಿಯು ಸಾರ್ವಜನಿಕರಿಗೆ ಅಪಾಯವಾಗುವ ವೇಗದಲ್ಲಿ ಅಥವಾ ರೀತಿಯಲ್ಲಿ ಹೆದ್ದಾರಿಯ ಮೇಲೆ ವಾಹನವನ್ನು ಅಥವಾ ಪ್ರಾಣಿಯನ್ನು ನಡೆಸಿದರೆ ಹೆದ್ದಾರಿಯ ಅಥವಾ ಸಾರ್ವಜನಿಕ ಸ್ಥಳದ ಸ್ವರೂಪ, ಸ್ಥಿತಿ ಮತ್ತು ಉಪಯೋಗ ಮತ್ತು ಹೆದ್ದಾರಿಯಲ್ಲಿ ಆ ಕಾಲದಲ್ಲಿ ವಾಸ್ತವವಾಗಿರುವ ಅಥವಾ ಇರಬಹುದೆಂದು ಸಕಾರಣವಾಗಿ ನಿರೀಕ್ಷಿಸಬಹುದಾದ ವಾಹನ ಸಂಚಾರದ ಪ್ರಮಾಣವೂ ಸೇರಿ ಆ ಪ್ರಕರಣದ ಎಲ್ಲಾ ಸಂದರ್ಭಗಳನ್ನು ಗಮನದಲ್ಲಿರಿಸಿಕೊಂಡು ಅಂಥ ವ್ಯಕ್ತಿಯು ಅಂಥ ಒಂದು ಅಪರಾಧಕ್ಕಾಗಿ ಮೊದಲ ಸಾರಿ ಅಪರಾಧಿಯೆಂದು

ನಿರ್ಣೀತನಾದರೆ, ಒಂದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಮತ್ತು ತರುವಾಯದ ಅಪರಾಧಕ್ಕಾಗಿ ಎರಡು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕದ್ದು.

**20. ವಾರಂಟಿಲ್ಲದೆ ದಸ್ತಗಿರಿ ಮಾಡುವ ಅಧಿಕಾರ.–** (1) ಸಮವಸ್ತ್ರಧಾರಿಯಾದ ಪೊಲೀಸ್ ಅಧಿಕಾರಿಯು,–

(ಎ) ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಅಗತ್ಯಪಡಿಸಿದಂತೆ ತನ್ನ ಹೆಸರು ಮತ್ತು ವಿಳಾಸವನ್ನು ಕೊಡಲು ನಿರಾಕರಿಸುವ ಅಥವಾ ಪೊಲೀಸ್ ಅಧಿಕಾರಿಯು ಸುಳ್ಳೆಂದು ನಂಬಲು ಕಾರಣವಿರುವ ಹೆಸರು ಮತ್ತು ವಿಳಾಸವನ್ನು ಕೊಡುವ ಯಾರೇ ವ್ಯಕ್ತಿಯನ್ನು; ಅಥವಾ

(ಬಿ) ಈ ಅಧಿನಿಯಮದ ಅಡಿಯಲ್ಲಿನ ಅಪರಾಧಕ್ಕೆ ಸಂಬಂಧಿಸಿದ ಅಥವಾ ಹಾಗೆ ಸಂಬಂಧಿಸಿರುವನೆಂದು ಸಕಾರಣವಾಗಿ ಶಂಕಿಸಲ್ಪಟ್ಟ ಯಾರೇ ವ್ಯಕ್ತಿಯು, ಅವನು ತಲೆತಪ್ಪಿಸಿಕೊಳ್ಳುವನೆಂದು ಅಥವಾ ಸಮನು ಜಾರಿಯಾಗದಂತೆ ಮತ್ತಾವುದೇ ರೀತಿಯಲ್ಲಿ ತಪ್ಪಿಸಿಕೊಳ್ಳುವನೆಂದು ಪೊಲೀಸ್ ಅಧಿಕಾರಿಗೆ ನಂಬಲು ಕಾರಣವಿದ್ದರೆ

––ಅವನನ್ನು ವಾರೆಂಟಿಲ್ಲದೆ ದಸ್ತಗಿರಿ ಮಾಡಬಹುದು.

(2) ವಾಹನದ ಅಥವಾ ಪ್ರಾಣಿಯ ಚಾಲಕನನ್ನು ಒಬ್ಬ ಪೊಲೀಸ್ ಅಧಿಕಾರಿಯು ಅಥವಾ ಇತರ ಪ್ರಾಧಿಕಾರಿಯು, ವಾರಂಟಿಲ್ಲದೆ ದಸ್ತಗಿರಿ ಮಾಡಲು ಸನ್ನಿವೇಶಗಳು ಅಗತ್ಯಪಡಿಸಿದರೆ, ವಾಹನ ಅಥವಾ ಪ್ರಾಣಿಯನ್ನು ತಾತ್ಕಾಲಿಕ ಅಭಿರಕ್ಷೆಯಲ್ಲಿಡಲು ತಾನು ಸೂಕ್ತವೆಂದು ಭಾವಿಸುವಂಥ ಯಾವುವೇ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು ಅಥವಾ ತೆಗೆದುಕೊಳ್ಳುವಂತೆ ಮಾಡತಕ್ಕದ್ದು.

**21. ಪ್ರಕರಣಗಳ ಕ್ಷಿಪ್ರ ವಿಲೆ.–** (1) ಈ ಅಧಿನಿಯಮದ ಅಡಿಯಲ್ಲಿ ಒಂದು ಅಪರಾಧದ ಬಗ್ಗೆ ಸಂಜ್ಞಾನವನ್ನು ತೆಗೆದುಕೊಳ್ಳುವ ನ್ಯಾಯಾಲಯವು, ಆಪಾದಿತ ವ್ಯಕ್ತಿಯ ಮೇಲೆ ಜಾರಿಯಾಗಬೇಕಾದ ಸಮನಿನಲ್ಲಿ ಅವನು,–

(ಎ) ಖುದ್ದಾಗಿ ಹಾಜರಾಗದೆ ನ್ಯಾಯವಾದಿಯ ಮೂಲಕ ಹಾಜರಾಗಬಹುದು; ಅಥವಾ

(ಬಿ) ದೋಷಾರೋಪದ ಸುನಾವಣೆಗೆ ಮುಂಚೆ ನಿರ್ದಿಷ್ಟಪಡಿಸಿದ ದಿನಾಂಕದೊಳಗಾಗಿ ನೋಂದಾಯಿತ ಪತ್ರದ ಮೂಲಕ ತಪ್ಪೊಪ್ಪಿಕೊಳ್ಳಬಹುದು ಮತ್ತು ನ್ಯಾಯಾಲಯವು ನಿರ್ದಿಷ್ಟಪಡಿಸಬಹುದಾದಂಥ ಮೊತ್ತವನ್ನು ನ್ಯಾಯಾಲಯಕ್ಕೆ ಸಂದಾಯ ಮಾಡಬಹುದು.

(2) ಆಪಾದಿತ ವ್ಯಕ್ತಿಯು, (1) ನೆಯ ಉಪ ಪ್ರಕರಣದ (ಬಿ) ಖಂಡದ ಮೇರೆಗೆ ತಪ್ಪೊಪ್ಪಿಕೊಂಡು, ನಿರ್ದಿಷ್ಟಪಡಿಸಿದ ಮೊತ್ತವನ್ನು ಸಂದಾಯ ಮಾಡಿದರೆ, ಆ ಅಪರಾಧದ ಸಂಬಂಧದಲ್ಲಿ ಆತನ ವಿರುದ್ಧ ಮುಂದಿನ ಯಾವುದೇ ವ್ಯವಹರಣೆಯನ್ನು ನಡೆಸತಕ್ಕದ್ದಲ್ಲ.

**22. ನಿಯಮಗಳನ್ನು ರಾಜ್ಯ ವಿಧಾನ ಮಂಡಲದ ಮುಂದೆ ಇಡುವುದು.–** ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಎಲ್ಲ ನಿಯಮಗಳನ್ನು, ಅವುಗಳನ್ನು ರಚಿಸಿದ ತರುವಾಯ ಸಾಧ್ಯವಾದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಇಡತಕ್ಕದ್ದು ಮತ್ತು ಸದರಿ ಅವಧಿಯು ಮುಗಿಯುವುದಕ್ಕೆ ಮುಂಚೆ, ರಾಜ್ಯ ವಿಧಾನ ಮಂಡಲದ ಉಭಯ ಸದನಗಳು ಯಾವುದೇ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಿದರೆ ಅಥವಾ ಅಂಥ ನಿಯಮವು ಪರಿಣಾಮ ಹೊಂದಿರತಕ್ಕದ್ದಲ್ಲವೆಂದು ನಿರ್ದೇಶಿಸಿದರೆ ಮತ್ತು ಆ ಮಾರ್ಪಾಟು ಅಥವಾ ನಿರ್ದೇಶನವನ್ನು ಇನ್ನೊಂದು ಸದನವು ಒಪ್ಪಿದರೆ, ಅಂಥ ನಿಯಮವು ಆ ತರುವಾಯ ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರ ಪರಿಣಾಮಕಾರಿಯಾಗತಕ್ಕದ್ದಲ್ಲ.

**23. ಅಸ್ತಿತ್ವದಲ್ಲಿರುವ ಉಪವಿಧಿಗಳನ್ನು ಮುಂದುವರಿಸುವುದು.–** ಈ ಅಧಿನಿಯಮದಲ್ಲಿ ಏನೇ ಅಡಕವಾಗಿದ್ದಾಗ್ಯೂ,–

(i) ಮುಂಬಯಿ ಮುನಿಸಿಪಲ್ ಬರೋ ಅಧಿನಿಯಮ, 1925 (1925ರ ಮುಂಬಯಿ ಅಧಿನಿಯಮ XVIII), ಮುಂಬಯಿ ಜಿಲ್ಲಾ ಪೌರಸಭಾ ಅಧಿನಿಯಮ, 1901 (1901ರ ಮುಂಬಯಿ ಅಧಿನಿಯಮ III), ಕೊಡಗು ಪೌರಸಭಾ ವಿನಿಯಮ, 1907 (1907ರ ಕೇಂದ್ರ ವಿನಿಯಮ II), ಹೈದರಾಬಾದ್ ಜಿಲ್ಲಾ ಪೌರಸಭೆಗಳ ಅಧಿನಿಯಮ, 1956 (1956ರ ಹೈದರಾಬಾದ್ ಅಧಿನಿಯಮ XVIII) – ಇವುಗಳ ಮೇರೆಗೆ ರಚಿಸಲಾಗಿದ್ದು; ಮತ್ತು

(ii) ಮದರಾಸು ಸಂಚಾರ ನಿಯಂತ್ರಣ ಅಧಿನಿಯಮ, 1938ರ (1938ರ ಮದರಾಸು ಅಧಿನಿಯಮ V) ಮತ್ತು ಮೈಸೂರು ಸಂಚಾರ ನಿಯಂತ್ರಣ ಅಧಿನಿಯಮ, 1955 (1956ರ ಮೈಸೂರು ಅಧಿನಿಯಮ 13) – ಇವುಗಳಿಂದ ಮುಂದುವರಿಸಲಾಗಿದ್ದು

– ಈ ಅಧಿನಿಯಮದ ಪ್ರಾರಂಭದಲ್ಲಿ ಜಾರಿಯಲ್ಲಿರುವ ಎಲ್ಲ ಉಪವಿಧಿಗಳು ಈ ಅಧಿನಿಯಮದ ಉಪಬಂಧಗಳೊಂದಿಗೆ ಸುಸಂಗತವಾಗುವಷ್ಟರ ಮಟ್ಟಿಗೆ ಸಿಂಧುವಾಗಿರುವುದು ಮುಂದುವರಿಯತಕ್ಕದ್ದು, ಆದರೆ ಅಂಥ ಉಪವಿಧಿಗಳನ್ನು ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ನಿಯಮದ ಮೂಲಕ ರದ್ದುಗೊಳಿಸಬಹುದು ಅಥವಾ ವ್ಯತ್ಯಾಸಗೊಳಿಸಬಹುದು.

**24. ನಿರಸನ ಮತ್ತು ಉಳಿಸುವಿಕೆಗಳು.–** ನಾಲ್ಕನೇ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಅಧಿನಿಯಮಿತಿಗಳನ್ನು ಅದರ ನಾಲ್ಕನೇ ಅಂಕಣದಲ್ಲಿ ಸೂಚಿಸಿರುವಷ್ಟರ ಮಟ್ಟಿಗೆ ನಿರಸಿತಗೊಳಿಸಲಾಗಿದೆ:

ಪರಂತು, [1][ಕರ್ನಾಟಕ][1] ಸಾಮಾನ್ಯ ಖಂಡಗಳ ಅಧಿನಿಯಮ, 1899 ರ (1899ರ [1][ಕರ್ನಾಟಕ][1] ಅಧಿನಿಯಮ III), 6 ನೆಯ ಪ್ರಕರಣದ ಉಪಬಂಧಗಳು, ನಾಲ್ಕನೆಯ ಅನುಸೂಚಿಯ 5, 6 ಮತ್ತು 7 ನೆಯ ಕ್ರಮಸಂಖ್ಯೆಗಳಲ್ಲಿ ನಿರ್ದಿಷ್ಟಪಡಿಸಲಾದ ಅಧಿನಿಯಮಿತಿಗಳ ನಿರಸನದ ಸಂಬಂಧದಲ್ಲಿ ಅನ್ವಯವಾಗತಕ್ಕದ್ದು ಮತ್ತು ಸದರಿ ಅಧಿನಿಯಮದ 8ನೇ ಪ್ರಕರಣ ಮತ್ತು 24 ನೆಯ ಪ್ರಕರಣಗಳು, ಸದರಿ ಅಧಿನಿಯಮಿತಿಗಳು ಈ ಅಧಿನಿಯಮದಿಂದ ನಿರಸನಗೊಂಡಿದ್ದು, ಪುನಃ ಅಧಿನಿಯಮಿತವಾಗಿದ್ದರೆ ಹೇಗೋ ಹಾಗೆ ಅನ್ವಯವಾಗತಕ್ಕದ್ದು.

1. **ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

ಒಂದನೇ ಅನುಸೂಚಿ

(4,5 ಮತ್ತು 6ನೇ ಪ್ರಕರಣಗಳನ್ನು ನೋಡಿ)

ಸಂಚಾರ ಚಿಹ್ನೆಗಳು

ಭಾಗ ಎ – ಆಜ್ಞಾಪಕ ಚಿಹ್ನೆಗಳು



ಸಂಖ್ಯೆ 5
ಹಿಂದಕ್ಕೆ ಹಾಕುವುದರ ನಿಷೇಧ




ಸಂಖ್ಯೆ 6
ಮುಂದೆ ಮುಖ್ಯ ರಸ್ತೆ ಇದೆ



ಭಾಗ ಬಿ – ಎಚ್ಚರಿಕೆ ನೀಡುವ ಚಿಹ್ನೆಗಳು

ಸಾಮಾನ್ಯ ವಿನ್ಯಾಸ




ಸಂಖ್ಯೆ 1
ಕಚ್ಚಾ ರಸ್ತೆ
ಸಂಖ್ಯೆ 2
ಅಂಕು ಡೊಂಕು (ಬಲಕ್ಕೆ)
ಸಂಖ್ಯೆ 2
ಅಂಕು ಡೊಂಕು (ಎಡಕ್ಕೆ)
ಸಂಖ್ಯೆ 3
ಅಡ್ಡ ರಸ್ತೆಗಳು
ಕೆಂಪು ಅಂಚು
ಅಂಚು
ಕೆಂಪು ಅಂಚು


ಸಂಖ್ಯೆ 4
ರೈಲು ರಸ್ತೆ ದಾಟು ಜಾಗ (ರಕ್ಷಿತ)
ಸಂಖ್ಯೆ 5
ರೈಲು ರಸ್ತೆ ದಾಟು ಜಾಗ (ಅರಕ್ಷಿತ)
ಸಂಖ್ಯೆ 6
ಬಲಕ್ಕೆ ತಿರುವು
ಸಂಖ್ಯೆ 6
ಎಡಕ್ಕೆ ತಿರುವು
ಕೆಂಪು ಅಂಚು


ಸಂಖ್ಯೆ 7
ಶಾಲೆಯಿದೆ
ಸಂಖ್ಯೆ 8
ರಸ್ತೆಗೆ ಕೊನೆ ಅಡ್ಡರಸ್ತೆ
ಸಂಖ್ಯೆ 9
ಪಕ್ಕದ ರಸ್ತೆ (ಬಲಗಡೆ)
ಸಂಖ್ಯೆ 9
ಪಕ್ಕದ ರಸ್ತೆ (ಎಡಗಡೆ)
ಕೆಂಪು ಅಂಚು


ಸಂಖ್ಯೆ 10
ಕಡಿದಾದ ಬೆಟ್ಟ
ಸಂಖ್ಯೆ 11
ಹಾಯ್ಗಡ
ಕೆಂಪು
ಅಂಚು
ಸಂಖ್ಯೆ 12
ಹೇರ್ ಪಿನ್ ತಿರುವು
(ಬಲಕ್ಕೆ)
ಸಂಖ್ಯೆ 12
ಹೇರ್ ಪಿನ್ ತಿರುವು
(ಎಡಕ್ಕೆ)
ಸಂಖ್ಯೆ 13
ಇಕ್ಕಟ್ಟಾದ ಸೇತುವೆ
ಕೆಂಪು
ಅಂಚು

ಭಾಗ ಸಿ – ಮಾಹಿತಿ ನೀಡುವ ಚಿಹ್ನೆಗಳು



## ಎರಡನೇ ಅನುಸೂಚಿ
## [5 ಮತ್ತು 6ನೆಯ ಪ್ರಕರಣಗಳನ್ನು ನೋಡಿ]
## ಚಾಲನೆಯ ವಿನಿಯಮಗಳು

1. ವಾಹನದ ಅಥವಾ ಪ್ರಾಣಿಯ ಚಾಲಕನು ಎಷ್ಟು ವಿಹಿತವೋ ಅಷ್ಟರ ಮಟ್ಟಿಗೆ, ರಸ್ತೆಯ ಎಡಪಕ್ಕಕ್ಕೆ ಸಮೀಪವಾಗಿ ವಾಹನವನ್ನು ಅಥವಾ ಸಂದರ್ಭಾನುಸಾರ ಪ್ರಾಣಿಯನ್ನು ನಡೆಸತಕ್ಕದ್ದು ಮತ್ತು ಎದುರು ದಿಕ್ಕಿನಲ್ಲಿ ಬರುತ್ತಿರುವ ಎಲ್ಲಾ ವಾಹನಗಳಿಗೂ ಅವನ ಬಲಪಕ್ಕದಲ್ಲಿ ಹೋಗಲು ಅವಕಾಶ ಮಾಡಿಕೊಡತಕ್ಕದ್ದು.

2. 3ನೆಯ ವಿನಿಯಮದಲ್ಲಿ ಉಪಬಂಧಿಸಲಾದುದನ್ನುಳಿದು, ವಾಹನದ ಅಥವಾ ಪ್ರಾಣಿಯ ಚಾಲಕನು ಅವನು ಹೋಗುವ ದಿಕ್ಕಿನಲ್ಲೇ ಮುಂದುವರಿಯುತ್ತಿರುವ ಎಲ್ಲಾ ವಾಹನಗಳ ಬಲಬದಿಯಲ್ಲೇ ಹೋಗತಕ್ಕದ್ದು.

3. ವಾಹನದ ಅಥವಾ ಪ್ರಾಣಿಯ ಚಾಲಕನು ಯಾವ ವಾಹನದ ಚಾಲಕನು ತನ್ನ ವಾಹನವನ್ನು ಬಲಬದಿಗೆ ತಿರುಗಿಸುವ ತನ್ನ ಉದ್ದೇಶವನ್ನು ಸೂಚಿಸಿ ರಸ್ತೆಯ ಮಧ್ಯಕ್ಕೆ ವಾಹನವನ್ನು ನಡೆಸುವನೋ ಅಂಥ ಮೋಟಾರು ವಾಹನ ಅಥವಾ ವಾಹನ ಅಥವಾ ಪ್ರಾಣಿಯ ಎಡಬದಿಯಲ್ಲಿ ಹೋಗಬಹುದು.

4. ವಾಹನದ ಅಥವಾ ಪ್ರಾಣಿಯ ಚಾಲಕನು,–

(ಎ) ಯಾವುದೇ ದಿಕ್ಕಿನಲ್ಲಿ ಚಲಿಸುತ್ತಿರುವ ಇತರ ವಾಹನಗಳಿಗೆ ಅವನು ದಾಟಿ ಹೋಗುವುದರಿಂದ ಅನಾನುಕೂಲ ಅಥವಾ ಅಪಾಯವು ಉಂಟಾಗುವ ಸಂಭವವಿರುವಲ್ಲಿ;

(ಬಿ) ಒಂದು ಸ್ಥಳ ಅಥವಾ ಮೂಲೆ ಅಥವಾ ಬೆಟ್ಟ ಅಥವಾ ಯಾವುದೇ ರೀತಿಯ ಅಡಚಣೆಯಿಂದಾಗಿ ಮುಂದಿರುವ ರಸ್ತೆಯು ಸ್ಪಷ್ಟವಾಗಿ ಕಾಣಿಸದಿದ್ದಲ್ಲಿ

– ಅವನು ಹೋಗುವ ದಿಕ್ಕಿನಲ್ಲೇ ಹೋಗುತ್ತಿರುವ ವಾಹನವನ್ನು ದಾಟಿ ಹೋಗತಕ್ಕದ್ದಲ್ಲ.

5. ವಾಹನದ ಅಥವಾ ಪ್ರಾಣಿಯ ಚಾಲಕನು, ಸಂಚಾರದ ಯಾವುದೇ ವರ್ಗದ ವಾಹನವು ಅವನ ವಾಹನವನ್ನು ಹಿಂದಕ್ಕೆ ಹಾಕಿದಾಗ ಅಥವಾ ದಾಟಿ ಮುಂದೆ ಹೋದಾಗ ಇತರ ವಾಹನವು ಅವನನ್ನು ದಾಟಿ ಹೋಗದಂತೆ ತಡೆಯಲು ಯಾವುದೇ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.

6. ವಾಹನದ ಅಥವಾ ಪ್ರಾಣಿಯ ಚಾಲಕನು, ರಸ್ತೆಗಳು ಪರಸ್ಪರ ಅಡ್ಡ ಹಾಯುವ ಸ್ಥಳವನ್ನು ಅಥವಾ ರಸ್ತೆಯ ಕೂಡು ಸ್ಥಳವನ್ನು, ರಸ್ತೆಯ ಮೂಲೆಯನ್ನು ಸಮೀಪಿಸುವಾಗ ವೇಗವನ್ನು ಕಡಿಮೆ ಮಾಡತಕ್ಕದ್ದು, ಮತ್ತು ಅದರಲ್ಲಿರುವ ವ್ಯಕ್ತಿಗಳ ಸುರಕ್ಷತೆಗೆ ಅಪಾಯವನ್ನುಂಟು ಮಾಡದೆ ತಾನು ಹೋಗಬಹುದು ಎನ್ನುವುದು ಅವನಿಗೆ ಖಚಿತವಾಗುವವರೆಗೆ ಅವನು ಯಾವುದೇ ಅಂಥ ಅಡ್ಡ ಹಾಯುವ ಸ್ಥಳವನ್ನು ಅಥವಾ ಕೂಡು ಸ್ಥಳವನ್ನು ಪ್ರವೇಶಿಸತಕ್ಕದ್ದಲ್ಲ.

7. ವಾಹನದ ಅಥವಾ ಪ್ರಾಣಿಯ ಚಾಲಕನು, ರಸ್ತೆಗಳು ಪರಸ್ಪರ ಅಡ್ಡ ಹಾಯುವ ಸ್ಥಳವನ್ನು ಪ್ರವೇಶಿಸಿದಾಗ, ಆ ರಸ್ತೆಯನ್ನು ಮುಖ್ಯ ರಸ್ತೆಯೆಂದು ಕರೆಯಲಾಗುತ್ತಿದ್ದರೆ, ಆ ರಸ್ತೆಯಲ್ಲಿ ಹೋಗುತ್ತಿರುವ ವಾಹನಗಳಿಗೆ ದಾರಿಯನ್ನು ಬಿಟ್ಟುಕೊಡತಕ್ಕದ್ದು ಮತ್ತು ಇತರ ಯಾವುದೇ ಸಂದರ್ಭದಲ್ಲಿ, ರಸ್ತೆಗಳು ಪರಸ್ಪರ ಅಡ್ಡ ಹಾಯುವ ಸ್ಥಳವನ್ನು ಬಲ ಬದಿಯಲ್ಲಿ ಸಮೀಪಿಸುತ್ತಿರುವ ಎಲ್ಲಾ ವಾಹನಗಳಿಗೆ ಹೋಗಲು ದಾರಿಯನ್ನು ಬಿಟ್ಟುಕೊಡತಕ್ಕದ್ದು.

8. ವಾಹನದ ಅಥವಾ ಪ್ರಾಣಿಯ ಚಾಲಕನು,–

(ಎ) ಎಡಕ್ಕೆ ತಿರುಗುವಾಗ, ಯಾವ ರಸ್ತೆಯ ಎಡಬದಿಗೆ ವಾಹನವನ್ನು ಅಥವಾ ಪ್ರಾಣಿಯನ್ನು ತಿರುಗಿಸಬೇಕೋ ಅಂಥ ರಸ್ತೆಯ ಎಡಬದಿಗೆ ಅದನ್ನು ಆದಷ್ಟು ಸಮೀಪವಾಗಿ ಮತ್ತು ಯಾವ ರಸ್ತೆಯ ಎಡಬದಿಗೆ ಪ್ರವೇಶಿಸಬೇಕೋ ಅಂಥ ರಸ್ತೆಯ ಎಡಬದಿಗೆ ಆದಷ್ಟು ಸಮೀಪವಾಗಿ ಆ ವಾಹನವನ್ನು ಅಥವಾ ಆ ಪ್ರಾಣಿಯನ್ನು ನಡೆಸತಕ್ಕದ್ದು;

(ಬಿ) ಬಲಬದಿಗೆ ತಿರುಗಿಸುವಾಗ, ಯಾವ ರಸ್ತೆಯಲ್ಲಿ ಅವನು ವಾಹನವನ್ನು ಅಥವಾ ಪ್ರಾಣಿಯನ್ನು ನಡೆಸುತ್ತಿರುವನೋ ಅಂಥ ರಸ್ತೆಯ ಮಧ್ಯಕ್ಕೆ ಸಾಧ್ಯವಾದಷ್ಟು ಸಮೀಪವಾಗಿ ಮತ್ತು ವಾಹನವು ಅಥವಾ ಪ್ರಾಣಿಯು,–

(i) ಅಡ್ಡ ಹಾಯುವ ರಸ್ತೆಗಳ ಮಧ್ಯ ರೇಖೆಗಳು ಸಂಧಿಸುವ ಬಿಂದುವಿನಿಂದಾಚೆಗೆ ಸಾಧ್ಯವಾದಷ್ಟು ದೂರದಲ್ಲಿ ಮತ್ತು ಆ ಬಿಂದುವು ಚಾಲಕನ ಬಲಬದಿಗೆ ಬರುವಂತೆ; ಮತ್ತು

(ii) ವಾಹನ ಅಥವಾ ಪ್ರಾಣಿಯ ಚಾಲಕನು ಪ್ರವೇಶಿಸುವ ರಸ್ತೆಯ ಎಡಬದಿಗೆ ಸಾಧ್ಯವಾದಷ್ಟು ಸಮೀಪವಾಗಿ ಬರುವಂತೆ

– ವಾಹನವನ್ನು ಅಥವಾ ಪ್ರಾಣಿಯನ್ನು ನಡೆಸತಕ್ಕದ್ದು.

## ಮೂರನೇ ಅನುಸೂಚಿ
## (7ನೆಯ ಪ್ರಕರಣವನ್ನು ನೋಡಿ)
## ಸಂಕೇತಗಳು

1. ವಾಹನವನ್ನು ಓಡಿಸುತ್ತಿರುವಾಗ, ಇನ್ನೊಂದು ವಾಹನವನ್ನು ದಾಟಿ ಮುಂದೆ ಹೋಗುವುದಕ್ಕಾಗಿ ಅಥವಾ ಇತರ ಯಾವುದೇ ಉದ್ದೇಶಕ್ಕಾಗಿ, ಬಲಬದಿಗೆ ತಿರುಗಿಸಲಿರುವಾಗ ಅಥವಾ ರಸ್ತೆಯ ಬಲ ಬದಿಗೆ ವಾಹನವನ್ನು ನಡೆಸಲಿರುವಾಗ ವಾಹನದ ಚಾಲಕನು, ವಾಹನದ ಹೊರಗಡೆಗೆ ಬಲಭಾಗಕ್ಕೆ ತನ್ನ ಬಲ ತೋಳನ್ನು ಅಥವಾ ಬಾರುಕೋಲನ್ನು ಹೊಂದಿದ್ದರೆ ಅದನ್ನು ಸಮತಲ ರೇಖೆಯಲ್ಲಿ ಚಾಚತಕ್ಕದ್ದು ಅಥವಾ ಅನ್ಯಥಾ ಹಿಂದಿನಿಂದ ಕೂಡಲೇ ಕಾಣಿಸುವಂತೆ ಚಾಚತಕ್ಕದ್ದು.

2. ವಾಹನದ ಚಾಲಕನು, ಮೋಟಾರು ವಾಹನದ ಅಥವಾ ತನ್ನ ಹಿಂದಿರುವ ವಾಹನದ ಚಾಲಕನಿಗೆ ತನ್ನನ್ನು ದಾಟಿ ಹೋಗಬಹುದೆಂದು ಸೂಚಿಸಲು ಬಯಸಿದರೆ, ಅವನು ತನ್ನ ಬಲತೋಳನ್ನು ಅಥವಾ ಬಾರುಕೋಲು ಹೊಂದಿದ್ದರೆ ಅದನ್ನು ವಾಹನದ ಹೊರಗಡೆಗೆ ತನ್ನ ಬಲ ಭಾಗಕ್ಕೆ ಅಥವಾ ಅನ್ಯಥಾ ಹಿಂದಿನಿಂದ ಕೂಡಲೇ ಕಾಣಿಸುವಂತೆ ಚಾಚತಕ್ಕದ್ದು ಮತ್ತು ತೋಳನ್ನು ಅಥವಾ ಸಂದರ್ಭಾನುಸಾರ ಬಾರುಕೋಲನ್ನು ಹಿಂದಕ್ಕೂ ಮತ್ತು ಮುಂದಕ್ಕೂ ಅರ್ಧ ವೃತ್ತಾಕಾರವಾಗಿ ತಿರುಗಿಸುತ್ತಿರತಕ್ಕದ್ದು.

## ನಾಲ್ಕನೆಯ ಅನುಸೂಚಿ

[1][24 ನೆಯ ಪ್ರಕರಣವನ್ನು ನೋಡಿ][1]

1. 2000 ದ ಅಧಿನಿಯಮ 22ರ ಮೂಲಕ 15.08.1979ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

### ನಿರಸನಗೊಳಿಸಲಾದ ಅಧಿನಿಯಮಿತಿಗಳು

| | ಅಧಿನಿಯಮದ ಹೆಸರು | ನಿರಸನದ ವ್ಯಾಪ್ತಿ |
|---|---|---|
| 1. | ಮುಂಬಯಿ ಜಿಲ್ಲಾ ಪೌರಸಭಾ ಅಧಿನಿಯಮ, 1901 (1901ರ ಮುಂಬಯಿ ಅಧಿನಿಯಮ III) | 48ನೆಯ ಪ್ರಕರಣದ (1) ನೆಯ ಉಪಪ್ರಕರಣದ (ಟಿ) ಖಂಡ |
| 2. | ಮುಂಬಯಿ ಪೌರಸಭಾ ಬರೋಸ್ ಅಧಿನಿಯಮ, 1925 (1925ರ ಮುಂಬಯಿ ಅಧಿನಿಯಮ XVIII) | 61ನೆಯ ಪ್ರಕರಣದ (1)ನೆಯ ಉಪ ಪ್ರಕರಣದ (ಜಡ್) ಖಂಡ |
| 3. | ಕೊಡಗು ಪೌರಸಭಾ ವಿನಿಯಮ, 1907 (1907ರ ಕೇಂದ್ರ ವಿನಿಯಮ II) | 99 ನೆಯ ಪ್ರಕರಣದ (1) ನೆಯ ಉಪ ಪ್ರಕರಣದ (ಆರ್) ಖಂಡ |
| 4. | ಹೈದರಾಬಾದ್ ಜಿಲ್ಲಾ ಪೌರಸಭೆಗಳ ಅಧಿನಿಯಮ, 1956 (1956ರ ಹೈದರಾಬಾದ್ ಅಧಿನಿಯಮ XVIII) | 311ನೆಯ ಪ್ರಕರಣದ(ಆರ್)ಖಂಡ |
| 5. | ಮೈಸೂರು ಹೆದ್ದಾರಿ ಅಧಿನಿಯಮ, 1920 (1920ರ ಮೈಸೂರು ಅಧಿನಿಯಮ IV) | ಪೂರ್ಣವಾಗಿ |
| 6. | ಮೈಸೂರು ಸಂಚಾರ ನಿಯಂತ್ರಣ ಅಧಿನಿಯಮ, 1955 (1956ರ ಮೈಸೂರು ಅಧಿನಿಯಮ 13) | ಪೂರ್ಣವಾಗಿ |
| 7. | ಮದರಾಸು ಸಂಚಾರ ನಿಯಂತ್ರಣ ಅಧಿನಿಯಮ, 1938 (1938ರ ಮದರಾಸು ಅಧಿನಿಯಮ V) | ಪೂರ್ಣವಾಗಿ |

### ಅಧಿಸೂಚನೆ

**ಬೆಂಗಳೂರು, ದಿನಾಂಕ 2ನೇ ಆಗಸ್ಟ್ 1979 (ಸಂಖ್ಯೆ ಎಚ್ ಡಿ 53 ಟಿ ಎಂ ಆರ್ 76)**

ಕರ್ನಾಟಕ ಸಂಚಾರ ನಿಯಂತ್ರಣ ಅಧಿನಿಯಮ, 1960ರ (1960ರ ಕರ್ನಾಟಕ ಅಧಿನಿಯಮ ಸಂಖ್ಯೆ 18) 1ನೇ ಪ್ರಕರಣದ (3) ನೇ ಉಪ ಪ್ರಕರಣದ (i) ನೇ ಖಂಡದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1979ರ ಆಗಸ್ಟ್ 15ನೇ ದಿನವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ವಿ.ಎನ್. ಸುಬ್ಬಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, ಗೃಹ ಇಲಾಖೆ.

## ಕರ್ನಾಟಕ ಸಂಚಾರ ನಿಯಂತ್ರಣ ನಿಯಮಗಳು, 1979

### ಅಧ್ಯಾಯ-I

1. ಹೆಸರು ಮತ್ತು ಪ್ರಾರಂಭ
2. ಪರಿಭಾಷೆಗಳು

### ಅಧ್ಯಾಯ-II

### ಸಂಚಾರ ನಿಯಂತ್ರಣ

3. ಹೆದ್ದಾರಿಯ ಮೇಲೆ ಒಂದೇ ಕಡೆ ನಿಂತಿರುವ ವಾಹನಗಳನ್ನು ಮತ್ತು ಬಿಟ್ಟುಹೋದ ಪ್ರಾಣಿಗಳನ್ನು ತೆಗೆಯುವುದು ಮತ್ತು ಅವುಗಳ ಅಭಿರಕ್ಷೆ
4. ತೂಕ ಮಾಡುವ ಸಾಧನಗಳ ಬಳಕೆ
5. ವಾಹನಗಳ ಮತ್ತು ಪ್ರಾಣಿಗಳ ನಿಲುಗಡೆ ಸ್ಥಳ
6. ಕಾಲುದಾರಿಗಳ ಬಳಕೆ

7. ಸಂಚಾರ ಪ್ರತ್ಯೇಕೀಕರಣ
8. ಶ್ರವ್ಯ ಸಂಕೇತಗಳ ಬಳಕೆ
9. ವಾಹನಗಳಿಗೆ ಹೇರುವುದು
10. ಘಟನೆ ನಡೆದ ಸ್ಥಳಕ್ಕೆ ಹೋಗುತ್ತಿರುವ ರೋಗಿವಾಹನ ಮತ್ತು ಅಗ್ನಿ ಶಾಮಕ ದಳದ ವಾಹನಗಳಿಗೆ ಮಾರ್ಗವನ್ನು ಮುಕ್ತವಾಗಿ ನೀಡುವುದು
11. ಚಕ್ರಗಳ ಅಡ್ಡಾದಿಡ್ಡಿ ಚಲನೆ
12. ಪ್ರಾಣಿಗಳ ನಿಯಂತ್ರಣ
13. ಮಕ್ಕಳ ನಿಯಂತ್ರಣ
14. ಸೈಕಲ್ ಸವಾರಿ
15. ವಾಹನಗಳ ಚಾಲಕರ ವಯೋಮಿತಿ
16. ವಾಹನಗಳ ಮತ್ತು ಪ್ರಾಣಿಗಳ ಮೇಲೆ ಸಾಗಿಸುವ ಹೇರುಗಳ ತಪಾಸಣೆ
17. ಪ್ರಾಣಿಗಳಿಗೆ ಮೂಗು ದಾರಗಳ ಬಳಕೆ
18. ರಾತ್ರಿ ವೇಳೆಯಲ್ಲಿ ವಾಹನಗಳನ್ನು ಮತ್ತು ಪ್ರಾಣಿಗಳನ್ನು ನಡೆಸುವುದು
19. ಸಂಚಾರಕ್ಕೆ ಉಂಟಾಗುವ ಅಪಾಯವನ್ನು ತಡೆಗಟ್ಟುವುದು
20. ಬೆಟ್ಟ ಏರುತ್ತಿರುವ ವಾಹನಕ್ಕೆ ಆದ್ಯತೆ ನೀಡುವುದು
21. ವಾಹನಗಳ ಪ್ರಯೋಗಾರ್ಥವಾಗಿ ಸಾರ್ವಜನಿಕ ಉದ್ಯಾನವನಗಳು, ಇತ್ಯಾದಿಗಳನ್ನು ಬಳಸುವುದು
22. ಪೊಲೀಸು ಅಧಿಕಾರಿಗಳು ನೀಡಬೇಕಾಗಿರುವ ಸಂಕೇತಗಳು

**ಅಧ್ಯಾಯ–III**

**ವಾಹನಗಳ ನಿರ್ಮಾಣ, ಸಜ್ಜುಗೊಳಿಸುವಿಕೆ ಮತ್ತು ನಿರ್ವಹಣೆ**

23. ವಾಹನಗಳ ಅಗಲ, ಎತ್ತರ ಮತ್ತು ಉದ್ದ.
24. ಚಕ್ರಗಳ ಮತ್ತು ಟೈರುಗಳ ಗಾತ್ರ, ಸ್ವರೂಪ ಮತ್ತು ಸ್ಥಿತಿ
25. ಬ್ರೇಕುಗಳು
26. ಎಚ್ಚರಿಕೆ ಸಾಧನ
27. ವಾಹನಗಳ ತಪಾಸಣೆ
28. ಅನುಮತಿಸಲಾದ ದರಪಟ್ಟಿ, ಇತ್ಯಾದಿಗಳನ್ನು ಪ್ರದರ್ಶಿಸುವುದು
29. ನಿರಸನ ಮತ್ತು ಉಳಿಸುವಿಕೆಗಳು

**ಅನುಸೂಚಿ–I**

ಪೊಲೀಸ್ ಅಧಿಕಾರಿಗಳು ನೀಡಬೇಕಾದ ಸಂಕೇತಗಳು

**ಅನುಸೂಚಿ–II**

ವಾಹನಗಳನ್ನು ತಪಾಸಣೆ ಮಾಡುವುದಕ್ಕೆ ಅಧಿಕಾರ ಹೊಂದಿರುವ ಪ್ರಾಧಿಕಾರಿಗಳು

## ಕರ್ನಾಟಕ ಸಂಚಾರ ನಿಯಂತ್ರಣ ನಿಯಮಗಳು, 1979

**(ಸಂಖ್ಯೆ ಹೆಚ್‌ಡಿ 41 ಟಿಎಂಆರ್ 79, ದಿನಾಂಕ 9.1.1991ರ ಅಧಿಸೂಚನೆಯ ಮೂಲಕ ತಿದ್ದುಪಡಿ ಮಾಡಲಾದಂತೆ)**

**ಗೃಹ ಸಚಿವಾಲಯ**

**ಅಧಿಸೂಚನೆ–I**

***(ಸಂಖ್ಯೆ ಹೆಚ್‌ಡಿ 53, ಟಿಎಂಆರ್ 76, ಬೆಂಗಳೂರು, ದಿನಾಂಕ 29 ನೇ ಜನವರಿ 1979)***

ಕರ್ನಾಟಕ ಸಂಚಾರ ನಿಯಂತ್ರಣ ಅಧಿನಿಯಮ, 1960ರ (1960ರ ಕರ್ನಾಟಕ ಅಧಿನಿಯಮ 18) 14 ಮತ್ತು 16 ನೇ ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ, ಕರ್ನಾಟಕ ಸಂಚಾರ ನಿಯಂತ್ರಣ ನಿಯಮಗಳು, 1978 ರ ಕರಡನ್ನು ಇದರಿಂದ ಬಾಧಿತರಾಗುವ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು 7 ನೇ ಸೆಪ್ಟೆಂಬರ್ 1978ರಂದು ಅಥವಾ ಅದಕ್ಕೂ ಮುಂಚೆ ಸಲ್ಲಿಸುವಂತೆ ಕೋರಿ, 1978ರ ಆಗಸ್ಟ್ 3 ನೇ ದಿನಾಂಕದ ಕರ್ನಾಟಕ ರಾಜ್ಯ ಪತ್ರದ ಭಾಗ –IV, ಪ್ರಕರಣ 2–ಸಿ (i) ರಲ್ಲಿ ಹೆಚ್ ಡಿ 53 ಟಿಎಂಆರ್ 76, ದಿನಾಂಕ 24ನೇ ಜುಲೈ 1976ರ ಅಧಿಸೂಚನೆ ಸಂಖ್ಯೆ 1 ರಲ್ಲಿ ಪ್ರಕಟಿಸಲಾಗಿರುವುದರಿಂದ;

ಮತ್ತು ಸದರಿ ರಾಜ್ಯಪತ್ರವನ್ನು 1978 ರ ಆಗಸ್ಟ್ 3 ನೇ ದಿನಾಂಕದಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡಿಗೆ ಸಂಬಂಧಿಸಿದಂತೆ ಯಾವುವೇ ಆಕ್ಷೇಪಣೆಗಳನ್ನು ಅಥವಾ ಸಲಹೆಗಳನ್ನು ಸ್ವೀಕರಿಸಿಲ್ಲದಿರುವುದರಿಂದ;

ಆದುದರಿಂದ ಈಗ, ಕರ್ನಾಟಕ ಸರ್ಕಾರವು, ಈ ಮೂಲಕ ಕರ್ನಾಟಕ ಸಂಚಾರ ನಿಯಂತ್ರಣ ಅಧಿನಿಯಮ, 1960ರ 14 ಮತ್ತು 16 ನೇ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

## ಅಧ್ಯಾಯ-I

1. **ಹೆಸರು ಮತ್ತು ಪ್ರಾರಂಭ.-** (1) ಈ ನಿಯಮಗಳನ್ನು ಕರ್ನಾಟಕ ಸಂಚಾರ ನಿಯಂತ್ರಣ ನಿಯಮಗಳು, 1979 ಎಂದು ಕರೆಯತಕ್ಕದ್ದು.

(2) ಇವು ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ [1][ದಿನಾಂಕ][1] ದಂದು ಜಾರಿಗೆ ಬರತಕ್ಕದ್ದು.

**1. ಈ ನಿಯಮಗಳನ್ನು 15.2.1979ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ ಭಾಗ-IV, 2ಸಿ(i) ಯಲ್ಲಿ 103ರಿಂದ 116ರ ಪುಟದಲ್ಲಿ ಪ್ರಕಟಿಸಲಾಗಿದೆ. ಜಿಎಸ್ಆರ್ 68 ನೋಡಿ. ಈ ನಿಯಮಗಳನ್ನು 1979ರ ಆಗಸ್ಟ್ 2 ನೇ ದಿನಾಂಕದ ಅಧಿಸೂಚನೆ II ಹೆಚ್ ಡಿ 53, ಟಿ ಎಂಆರ್ 76, ದಿನಾಂಕ 15.8.1979ರಿಂದ ಪರಿಣಾಮಕಾರಿಯಾಗುವಂತೆ ಜಾರಿಗೊಳಿಸಲಾಗಿದೆ. ಮೂಲ ಅಧಿಸೂಚನೆಯ ಪಾಠವನ್ನು ಪುಟ ನಿಯಮಗಳ ಕೊನೆಯ ಪುಟದಲ್ಲಿ ನೀಡಲಾಗಿದೆ.**

2. **ಪರಿಭಾಷೆಗಳು.-** ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) "ಅಧಿನಿಯಮ" ಎಂದರೆ, ಕರ್ನಾಟಕ ಸಂಚಾರ ನಿಯಂತ್ರಣ ಅಧಿನಿಯಮ, 1960;

(ಬಿ) "ಬೆಂಗಳೂರು ನಗರ" ಎಂದರೆ, ಕರ್ನಾಟಕ ಪೊಲೀಸ್ ಅಧಿನಿಯಮ, 1963(1964ರ ಅಧಿನಿಯಮ 4)ರ 2ನೇ ಪ್ರಕರಣದ (2) ನೇ ಖಂಡದಲ್ಲಿ ಪರಿಭಾಷಿಸಲಾದ ಬೆಂಗಳೂರು ನಗರ;

(ಸಿ) "ಘಟ್ಟದ ರಸ್ತೆ" ಎಂದರೆ, ಜಿಲ್ಲೆಯ ಜಿಲ್ಲಾ ಮ್ಯಾಜಿಸ್ಟ್ರೇಟರು ಯಾವ ಜಿಲ್ಲೆಯಲ್ಲಿ ರಸ್ತೆಯ ಪ್ರತಿಯೊಂದು ಕೊನೆಗೆ ಘಟ್ಟದ ರಸ್ತೆಯೆಂದು ಸೂಚನಾ ಫಲಕಗಳನ್ನು ನಿಲ್ಲಿಸುವ ಮೂಲಕ ಅಧಿಸೂಚಿಸಿರುವರೋ ಅಂಥ ಒಂದು ರಸ್ತೆ;

(ಡಿ) "ಅನುಸೂಚಿ" ಎಂದರೆ, ಈ ನಿಯಮಗಳಿಗೆ ಸೇರಿದ ಅನುಸೂಚಿ;

(ಇ) "ಪ್ರಕರಣ" ಎಂದರೆ, ಅಧಿನಿಯಮದ ಒಂದು ಪ್ರಕರಣ;

(ಎಫ್) "ಸರ್ಕಾರ" ಎಂದರೆ, ಕರ್ನಾಟಕ ಸರ್ಕಾರ;

(ಜಿ) "ಸ್ಥಳೀಯ ಪ್ರಾಧಿಕಾರ" ಎಂದರೆ,-

(i) ಯಾವುದೇ ಪೌರಸಭಾ ಕ್ಷೇತ್ರದಲ್ಲಿ, ಸಂದರ್ಭಾನುಸಾರ, ನಗರ ಸಭೆ, ನಗರ ಪರಿಷತ್ತು, ದಂಡು ಪ್ರದೇಶ ಮಂಡಲಿ, ನೈರ್ಮಲ್ಯ ಮಂಡಲಿ ಅಥವಾ ಅಧಿಸೂಚಿತ ಪ್ರದೇಶ ಸಮಿತಿ; ಮತ್ತು

(ii) ಯಾವುದೇ ಗ್ರಾಮದಲ್ಲಿ, ಕರ್ನಾಟಕ ಗ್ರಾಮ ಪಂಚಾಯತಿಗಳ ಮತ್ತು ಸ್ಥಳೀಯ ಮಂಡಲಿಗಳ ಅಧಿನಿಯಮ, 1959ರ ಅಡಿಯಲ್ಲಿ ರಚಿತವಾದ ಗ್ರಾಮ ಪಂಚಾಯಿತಿ ಅಥವಾ ಪಟ್ಟಣ ಪಂಚಾಯಿತಿ.

## ಅಧ್ಯಾಯ-II

### ಸಂಚಾರ ನಿಯಂತ್ರಣ

3. **ಹೆದ್ದಾರಿಯ ಮೇಲೆ ಒಂದೇ ಕಡೆ ನಿಂತಿರುವ ವಾಹನಗಳನ್ನು ಮತ್ತು ಬಿಟ್ಟುಹೋದ ಪ್ರಾಣಿಗಳನ್ನು ತೆಗೆಯುವುದು ಮತ್ತು ಅವುಗಳ ಅಭಿರಕ್ಷೆ.-** (1) ಯಾರೇ ಚಾಲಕನು, ಸರಕುಗಳನ್ನು ತುಂಬಲು ಅಥವಾ ಇಳಿಸಲು ಅಥವಾ ಪ್ರಯಾಣಿಕರನ್ನು ಹತ್ತಿಸಿಕೊಳ್ಳಲು ಅಥವಾ ಇಳಿಸಲು ಅಗತ್ಯವಿರುವುದಕ್ಕಿಂತ ಹೆಚ್ಚು ಕಾಲ ಯಾವುದೇ ಹೆದ್ದಾರಿಯ ಮೇಲೆ ಯಾವುದೇ ವಾಹನ ಅಥವಾ ಪ್ರಾಣಿ ಇರುವಂತೆ ಅಥವಾ ನಿಲ್ಲುವಂತೆ ಮಾಡತಕ್ಕದ್ದಲ್ಲ ಅಥವಾ ಅದಕ್ಕೆ ಅವಕಾಶ ನೀಡತಕ್ಕದ್ದಲ್ಲ ಅಥವಾ ಹೆದ್ದಾರಿಯ ಬಳಕೆದಾರರಿಗೆ ಅಪಾಯ ಅಥವಾ ತಡೆ ಅಥವಾ ಅನುಚಿತ ಅನಾನುಕೂಲವನ್ನು ಉಂಟು ಮಾಡುವಂಥ ಅಥವಾ ಉಂಟು ಮಾಡುವ ಸಂಭವವಿರುವಂಥ ಸ್ಥಿತಿಯಲ್ಲಿ ಅಥವಾ ಸನ್ನಿವೇಶದಲ್ಲಿ ಅವನ್ನು ಇರಿಸತಕ್ಕದ್ದಲ್ಲ.

(2) ಯಾವುದೇ ಹೆದ್ದಾರಿಯ ಮೇಲೆ, ಯಾವುದೇ ಪ್ರಾಣಿಯನ್ನು ಹೊಂದಿರುವ ಅಥವಾ ಹೊಂದಿಲ್ಲದಿರುವ ದಲ್ಲಾಳಿಯು ಯಾವುದೇ ವಾಹನವನ್ನು ನಿಲ್ಲಿಸಲು ಅನುಮತಿಸಿದರೆ ಅಥವಾ ಅಲ್ಲಿಯೇ ನಿಂತಿರುವಂತೆ ಮಾಡಿದರೆ ಅಥವಾ ಬಿಟ್ಟುಹೋದರೆ , ಯಾರೇ ಪೊಲೀಸ್ ಅಧಿಕಾರಿಯು,-

(i) ತನ್ನ ಸ್ವಂತ ಶಕ್ತಿಯ ಮೇಲೆ ಅಥವಾ ಇತರ ಯಾವುದೇ ಸಾಧನವನ್ನು ಬಳಸಿ, ಕೂಡಲೇ, ವಾಹನ ಅಥವಾ ಸಂದರ್ಭಾನುಸಾರ ಪ್ರಾಣಿಯನ್ನು, ಹೆದ್ದಾರಿ ಬಳಕೆದಾರರಿಗೆ ಅಪಾಯ, ತಡೆ ಅಥವಾ ಅನುಚಿತ ಅನಾನುಕೂಲ ಉಂಟಾಗದ ಅಥವಾ ಉಂಟಾಗದೆ ಇರಬಹುದಾದ ಹತ್ತಿರದ ಸ್ಥಳಕ್ಕೆ ಸಾಗಿಸಬಹುದು;

(ii) ಅದನ್ನು ಹಾಗೆ ತೆಗೆಯಲು ಆಗದಿದ್ದರೆ, ಅದರ ಇರುವಿಕೆಯನ್ನು ತೋರಿಸಲು ಎಲ್ಲ ಮುನ್ನೆಚ್ಚರಿಕೆ ಕ್ರಮಗಳನ್ನು ಕೈಗೊಳ್ಳಬೇಕು;

(iii) ನಿರಂತರ ಇಪ್ಪತ್ತನಾಲ್ಕು ಗಂಟೆಗಳವರೆಗೆ ವಾಹನವನ್ನು ಒಂದೇ ಸ್ಥಳದಲ್ಲಿ ನಿಲ್ಲಿಸಿದ್ದಲ್ಲಿ ಮತ್ತು ಅದರ ಮಾಲೀಕ ಅಥವಾ ಪ್ರತಿನಿಧಿಯು, ಅದನ್ನು ದುರಸ್ತಿ ಮಾಡಲು ಅಥವಾ ಸಾಗಿಸಲು ಸಾಕಷ್ಟು ಕ್ರಮ ಕೈಗೊಳ್ಳದಿದ್ದಲ್ಲಿ ಅದನ್ನು ಮತ್ತು ಅದರಲ್ಲಿನ ವಸ್ತುವನ್ನು ಸಮೀಪದ ಸುರಕ್ಷಿತ ಅಭಿರಕ್ಷೆಗೆ ಸಾಗಿಸಬಹುದು.

**4. ತೂಕ ಮಾಡುವ ಸಾಧನಗಳ ಬಳಕೆ.–** (1) ಯಾವುದೇ ವಾಹನವು ಈ ನಿಯಮಗಳ ಅಡಿಯಲ್ಲಿ ಅನುಮತಿಸಲಾದ ಭಾರಕ್ಕಿಂತ ಹೆಚ್ಚಿನ ಭಾರವನ್ನು ಕೊಂಡೊಯ್ಯುತ್ತಿರುವುದೆಂದು ನಂಬಲು ಕಾರಣವಿದ್ದರೆ, ಸಬ್‌ಇನ್ಸ್‌ಪೆಕ್ಟರ್ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಯಾರೇ ಪೊಲೀಸ್ ಅಧಿಕಾರಿಯು, ಚಾಲಕ ಅಥವಾ ಅದರ ಪ್ರಭಾರ ಹೊಂದಿರುವ ವ್ಯಕ್ತಿಗೆ ಅಂಥ ವಾಹನವನ್ನು ಅದರಲ್ಲಿರುವ ತೂಕವನ್ನು ಖಚಿತಪಡಿಸಿಕೊಳ್ಳುವ ಉದ್ದೇಶಕ್ಕಾಗಿ ಸ್ಥಾಪಿಸಲಾಗಿರುವ ತೂಕ ಮಾಡುವ ಸಾಧನವಿರುವ [1][ಐದು ಕಿಲೋಮೀಟರನ್ನು ಮೀರದ][1] ಸಮೀಪದ ಸ್ಥಳಕ್ಕೆ ಅಂಥ ವಾಹನವನ್ನು ತೆಗೆದುಕೊಂಡು ಬರುವಂತೆ ನಿರ್ದೇಶಿಸಬಹುದು.

**1. 1981ರ ಜನವರಿ 9 ನೇ ದಿನಾಂಕದ ಅಧಿಸೂಚನೆ ಸಂಖ್ಯೆ ಹೆಚ್‌ಡಿ 41 ಟಿಎಂಆರ್ 79ರ ಮೂಲಕ ಸೇರಿಸಲಾಗಿದೆ. ನಿಯಮಗಳ ಕೊನೆಯ ಪುಟದಲ್ಲಿರುವ ಅಧಿಸೂಚನೆಯನ್ನು ದಯವಿಟ್ಟು ನೋಡಿ.**

(2) ಈ ನಿಯಮದ ಅಡಿಯಲ್ಲಿನ ಉದ್ದೇಶಗಳಿಗಾಗಿ ತೂಕ ಮಾಡುವ ಸಾಧನವು,–

(i) ಸರ್ಕಾರ ಅಥವಾ ಸ್ಥಳೀಯ ಪ್ರಾಧಿಕಾರದ ಅಥವಾ ರೈಲ್ವೆ ಆಡಳಿತದ ಆದೇಶಗಳ ಮೂಲಕ ಅಥವಾ ಮೇರೆಗೆ ಯಾವುದೇ ಸ್ಥಳದಲ್ಲಿ ಸ್ಥಾಪಿಸಲಾದ ಅಥವಾ ನಿರ್ವಹಿಸಲಾದ ತೂಕದ ಯಂತ್ರವಾಗಿರಬಹುದು;

(ii) ಯಾರೇ ವ್ಯಕ್ತಿಯಿಂದ ಸ್ಥಾಪಿಸಲಾದ ಮತ್ತು ನಿರ್ವಹಿಸಲಾದ ಹಾಗೂ ಮೋಟಾರು ವಾಹನಗಳ ಅಧಿನಿಯಮ ಮತ್ತು ಅದರ ಅಡಿಯಲ್ಲಿ ರಚಿಸಲಾದ ನಿಯಮಗಳ ಉದ್ದೇಶಗಳಿಗಾಗಿ ತೂಕ ಮಾಡುವ ಸಾಧನವಾಗಿರುವುದಾಗಿ ಕರ್ನಾಟಕದಲ್ಲಿನ ಸಾರಿಗೆ ಕಮೀಷನರು ಪ್ರಮಾಣೀಕರಿಸಿದ ತೂಕದ ಯಂತ್ರವಾಗಿರಬಹುದು; ಅಥವಾ

(iii) ಸರ್ಕಾರವು ಅನುಮೋದಿಸಿದ ಯಾವುದೇ ವಿಧದ ಚಕ್ರಗಳುಳ್ಳ, ಸಾಗಿಸಲು ಸುಲಭವಾದ ತೂಕ ಮಾಡುವ ಯಂತ್ರವಾಗಿರಬಹುದು.

(3) ಈ ನಿಯಮಗಳ ಅಡಿಯಲ್ಲಿ ನಿಯಮಿಸಲಾದ ಭಾರಕ್ಕಿಂತ ಹೆಚ್ಚಿನ ಭಾರವನ್ನು ಕೊಂಡೊಯ್ಯುತ್ತಿರುವನೆಂದು ನಂಬಲು ಕಾರಣವಿದ್ದರೆ (1) ನೇ ಉಪ ನಿಯಮದಲ್ಲಿ ನಿಯಮಿಸಲಾದ ಯಾರೇ ಪೊಲೀಸ್ ಅಧಿಕಾರಿಯು ಕೇಳಿದಾಗ ಅಂಥ ಯಾವುದೇ ವಾಹನದ ಚಾಲಕನು, ತೂಕದ ಯಂತ್ರ ಅಥವಾ ಚಕ್ರಗಳುಳ್ಳ ತೂಕದ ಸಾಧನದಿಂದ ಯಾವುದೇ ಚಕ್ರ ಅಥವಾ ಚಕ್ರಗಳ ಮೂಲಕ ವಾಹನದ ತೂಕ ಅಥವಾ ಸಾಗಣೆ ಮಾಡಿದ ತೂಕವನ್ನು ಪ್ರದರ್ಶಿಸುವಂಥ ರೀತಿಯಲ್ಲಿರುವ ತೂಕದ ಯಂತ್ರ ಅಥವಾ ಸಂದರ್ಭಾನುಸಾರ, ಚಕ್ರಗಳುಳ್ಳ ತೂಕದ ಸಾಧನದ ಮೇಲೆ ಅದರ ಯಾವುದೇ ಚಕ್ರ ಅಥವಾ ಚಕ್ರಗಳನ್ನು ಇರಿಸಲು ವಾಹನವನ್ನು ಚಾಲನೆ ಮಾಡತಕ್ಕದ್ದು ಮತ್ತು ಕುಶಲತೆಯಿಂದ ನಿರ್ವಹಿಸತಕ್ಕದ್ದು.

(4) (1) ನೇ ಉಪ ನಿಯಮದ ಅಡಿಯಲ್ಲಿ ಮಾಡಲಾದ ಕೋರಿಕೆಯನ್ನು ವಾಹನದ ಚಾಲಕನು ಸೂಕ್ತ ಸಮಯದೊಳಗೆ ಪಾಲಿಸಲು ತಪ್ಪಿದರೆ, ಪೊಲೀಸ್ ಅಧಿಕಾರಿಯು, ಅಂಥ ವಾಹನವನ್ನು ಚಾಲನೆ ಮಾಡಲು ಲೈಸನ್ಸ್ ಧಾರಕನಾಗಿರುವ ಯಾರೇ ಇತರ ವ್ಯಕ್ತಿಯನ್ನು ಆ ವಾಹನವನ್ನು ಚಾಲನೆ ಮಾಡುವಂತೆ ಅಥವಾ ಕುಶಲತೆಯಿಂದ ನಿರ್ವಹಿಸುವಂತೆ ಅಧಿಕಾರ ನೀಡಬಹುದು.

(5) ಈ ನಿಯಮಗಳಿಗನುಸಾರವಾಗಿ ವಾಹನವನ್ನು ತೂಕ ಮಾಡಿದ ಮೇಲೆ, ತೂಕ ಮಾಡಲು ಅಗತ್ಯಪಡಿಸಲಾದ ವ್ಯಕ್ತಿ ಅಥವಾ ತೂಕ ಮಾಡುವ ಸಾಧನವನ್ನು ಹೊಂದಿರುವ ವ್ಯಕ್ತಿಯು, ವಾಹನದ ಮತ್ತು ಅದರಲ್ಲಿ ಹೇರಿರುವ ತೂಕದ ಬಗ್ಗೆ ಲಿಖಿತದಲ್ಲಿ ವಿವರಣೆಯನ್ನು ಆ ವಾಹನದ ಚಾಲಕ ಅಥವಾ ಅದರ ಪ್ರಭಾರದಲ್ಲಿರುವ ಯಾರೇ ಇತರ ವ್ಯಕ್ತಿಗೆ ನೀಡತಕ್ಕದ್ದು.

(6) ಹಾಗೆ ತೂಕ ಮಾಡಲಾದ ವಾಹನದ ಚಾಲಕ ಅಥವಾ ಅದರ ಪ್ರಭಾರದಲ್ಲಿರುವ ಇತರ ವ್ಯಕ್ತಿ ಅಥವಾ ಮಾಲೀಕನು ಹತ್ತು ರೂಪಾಯಿಗಳನ್ನು ಠೇವಣಿಯಿಡುವ ಮೂಲಕ,–

(i) (5) ನೇ ಉಪ ನಿಯಮದಲ್ಲಿ ಉಲ್ಲೇಖಿಸಿರುವ ವಿವರಣೆಯನ್ನು ಸ್ವೀಕರಿಸಿದ ಒಂದು ಗಂಟೆಯೊಳಗಾಗಿ ಅದನ್ನು ನೀಡಿದಂತಹ ವ್ಯಕ್ತಿಗೆ; ಅಥವಾ

(ii) 18 ನೇ ಪ್ರಕರಣದ ಅಡಿಯಲ್ಲಿ ಅವನ ವಿರುದ್ಧ ವ್ಯವಹರಣೆಯ ನೋಟೀಸನ್ನು ಅವನಿಗೆ ಜಾರಿ ಮಾಡಿದಂದಿನಿಂದ ಹದಿನಾಲ್ಕು ದಿನಗಳೊಳಗಾಗಿ ಅಂಥ ನೋಟೀಸನ್ನು ಜಾರಿ ಮಾಡಿದ ನ್ಯಾಯಾಲಯಕ್ಕೆ

– ತೂಕ ಮಾಡುವ ಯಂತ್ರದ ನಿಖರತೆಯ ಬಗ್ಗೆ ಲಿಖಿತ ಆಕ್ಷೇಪಣೆಯನ್ನು ವ್ಯಕ್ತಪಡಿಸಬಹುದು.

(7) (6) ನೇ ಉಪ ನಿಯಮದ ಅಡಿಯಲ್ಲಿ ತೂಕದ ಸಾಧನದ ನಿಖರತೆಯ ಬಗ್ಗೆ ಆಕ್ಷೇಪವೆತ್ತಿ ನೀಡಲಾದ ವಿವರವಣೆಯನ್ನು ಸ್ವೀಕರಿಸಿದ ತರುವಾಯ ವಿವರಣೆಯನ್ನು ಪಡೆದ ವ್ಯಕ್ತಿ ಅಥವಾ ನ್ಯಾಯಾಲಯವು, ತೂಕ ಮತ್ತು ಅಳತೆಗಳ ಇನ್ಸ್‌ಪೆಕ್ಟರಿಂದ ತೂಕ ಮಾಡುವ ಸಾಧನವನ್ನು ಪರೀಕ್ಷಿಸುವುದಕ್ಕಾಗಿ, ಮೋಟಾರು ವಾಹನಗಳ ಅಧಿನಿಯಮ, 1939ರ ಅಡಿಯಲ್ಲಿ ನೇಮಕ ಮಾಡಲಾದ ನೋಂದಣಿ ಪ್ರಾಧಿಕಾರಕ್ಕೆ ಮನವಿ ಮಾಡತಕ್ಕದ್ದು ಮತ್ತು ತೂಕ ಮಾಡುವ ಸಾಧನದ ನಿಖರತೆಗೆ ಸಂಬಂಧಿಸಿದಂತೆ ಅಂಥ ತಪಾಸಣಾ ಅಧಿಕಾರಿ ನೀಡುವ ಪ್ರಮಾಣ ಪತ್ರವು ಅಂತಿಮವಾಗಿರತಕ್ಕದ್ದು.

(8) (7)ನೇ ಉಪನಿಯಮದ ಅಡಿಯಲ್ಲಿ ತೂಕದ ಸಾಧನವನ್ನು ಪರೀಕ್ಷಿಸಿದ ಮೇಲೆ, (5) ನೇ ಉಪ ನಿಯಮದಲ್ಲಿ ಉಲ್ಲೇಖಿಸಲಾದ ವಿವರಣೆಯಲ್ಲಿ ತೋರಿಸಿರುವ, ವಾಹನದಲ್ಲಿ ಭಾರ ಹೇರಿರುವ ಅಥವಾ ಭಾರ ಹೇರಿಲ್ಲದ ತೂಕವು ಯಾವುದೇ ತೂಕಕ್ಕೆ ಕಡಿಮೆಯಿಲ್ಲದಂತೆ ಕರಾರುವಕ್ಕಾಗಿ ತೂಗುವ ಯಂತ್ರವೆಂದು ಪ್ರಮಾಣೀಕೃತವಾಗಿರತಕ್ಕದ್ದು ಹಾಗೂ ನೋಂದಾಯಿತ ಹೇರು ತೂಕ ಮತ್ತು ನೋಂದಾಯಿತ ಭಾರ ಹೇರಿದ ತೂಕ ಅಥವಾ ಸಂದರ್ಭಾನುಸಾರ ಭಾರ ಹೇರಿಲ್ಲದ ತೂಕವನ್ನು ಮೀರಿಲ್ಲವೆಂದು ತೂಕದ ಸಾಧನವು ನಿಖರವಾಗಿದೆಯೆಂದು ಪ್ರಮಾಣೀಕರಿಸಿದರೆ ನಿಯಮದ ಉಲ್ಲಂಘನೆಯು ಸಾಬೀತಾದಂತಾಗತಕ್ಕದ್ದು.

(9) (7) ನೇ ಉಪ ನಿಯಮದ ಅಡಿಯಲ್ಲಿ ತೂಕದ ಸಾಧನವನ್ನು ಪರೀಕ್ಷಿಸಿದ ಮೇಲೆ, ತೂಕದ ಸಾಧನವು ನಿಖರವಾಗಿಲ್ಲವೆಂದು ಪ್ರಮಾಣೀಕರಿಸಿದರೆ, ವಾಹನದ ಚಾಲಕ ಅಥವಾ ಸಂದರ್ಭಾನುಸಾರ ಅದರ ಉಸ್ತುವಾರಿಯಲ್ಲಿರುವ ವ್ಯಕ್ತಿಯ ವಿರುದ್ಧ 18 ನೇ ಪ್ರಕರಣದ ಅಡಿಯಲ್ಲಿ ಯಾವುವೇ ವ್ಯವಹರಣೆಗಳನ್ನು ಹೂಡತಕ್ಕದ್ದಲ್ಲ.

**5. ವಾಹನಗಳ ಮತ್ತು ಪ್ರಾಣಿಗಳ ನಿಲುಗಡೆ ಸ್ಥಳ.–** (1) ಯಾರೇ ವ್ಯಕ್ತಿಯು, ವಾಹನಗಳ ಅಥವಾ ಪ್ರಾಣಿಗಳ ನಿಲುಗಡೆ ಸ್ಥಳವೆಂದು ನಿರ್ದಿಷ್ಟಪಡಿಸಲಾದ ಸ್ಥಳವನ್ನು ಹೊರತುಪಡಿಸಿ ಯಾವುದೇ ಇತರ ಸ್ಥಳಗಳಲ್ಲಿ ಯಾವುದೇ ವಾಹನ ಅಥವಾ ಪ್ರಾಣಿಯನ್ನು ನಿಲ್ಲಿಸತಕ್ಕದ್ದಲ್ಲ ಅಥವಾ ನಿಲ್ಲಿಸುವಂತೆ ಮಾಡತಕ್ಕದ್ದಲ್ಲ.

(2) ಪ್ರತಿಯೊಂದು ಸ್ಥಳೀಯ ಪ್ರಾಧಿಕಾರವು, ತನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಪ್ರದೇಶದಲ್ಲಿ ಅಂಥ ಪ್ರದೇಶದ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಪೊಲೀಸ್ ಅಧೀಕ್ಷಕರೊಂದಿಗೆ ಸಮಾಲೋಚಿಸಿ, ವಾಹನಗಳು ಮತ್ತು ಪ್ರಾಣಿಗಳ ಬಳಕೆಗಾಗಿ ನಿಲುಗಡೆ ಸ್ಥಳವನ್ನು ಗೊತ್ತುಪಡಿಸತಕ್ಕದ್ದು.

(3) ಅಂಥ ನಿಲುಗಡೆ ಸ್ಥಳವನ್ನು ಹೆದ್ದಾರಿ ಅಂಚಿನ ಕೊನೆಯಲ್ಲಿ ಗೊತ್ತುಪಡಿಸತಕ್ಕದ್ದು.

(4) ಅಂಥ ಎಲ್ಲ ನಿಲುಗಡೆ ಸ್ಥಳಗಳನ್ನು, ಅವು ಯಾರ ಸ್ಥಳೀಯ ಪ್ರಾಧಿಕಾರದಲ್ಲಿ ಇವೆಯೋ ಆ ಪ್ರಾಧಿಕಾರವೇ ನಿರ್ವಹಿಸತಕ್ಕದ್ದು.

**6. ಕಾಲುದಾರಿಗಳ ಬಳಕೆ.–** (1) ಕಾಲಿನ ಮೂಲಕ, ದ್ವಿಚಕ್ರ ಸೈಕಲ್ಲು, ತ್ರಿಚಕ್ರ ಸೈಕಲ್ಲು ಅಥವಾ ತಳ್ಳುಗಾಡಿಯ ಮೂಲಕ ಓಡಾಟದ ಯಾರೇ ವ್ಯಕ್ತಿಯು, ಯುಕ್ತ ಕಾರಣವಿಲ್ಲದೆ, ಪಾದಚಾರಿಗಳ ಬಳಕೆಗೆಂದೇ ಪ್ರತ್ಯೇಕವಾಗಿ ಎರಡೂ ಕಡೆ ಅಥವಾ ಒಂದು ಕಡೆ ವ್ಯವಸ್ಥೆ ಮಾಡಿರುವ ಸಾಗಣೆ ದಾರಿಯಲ್ಲಿ ವಾಹನವನ್ನು ನಡೆಸತಕ್ಕದ್ದಲ್ಲ.

(2) ಪಾದಚಾರಿಗಳ ಬಳಕೆಗೆಂದೇ ಪ್ರತ್ಯೇಕವಾಗಿರುವ ಯಾವುದೇ ಕಾಲುದಾರಿಯು ಸಾಗಣೆದಾರಿಯ ಸಮೀಪದಲ್ಲಿ ಇಲ್ಲದಿದ್ದರೆ, ಯಾರೇ ವ್ಯಕ್ತಿಯು, ಯುಕ್ತ ಕಾರಣವಿಲ್ಲದೆ ಸಾಗಣೆದಾರಿಯ ಎಡಬದಿಯ ಮೇಲಲ್ಲದೆ ಅದರ ಮೇಲೆ ನಡೆದುಹೋಗತಕ್ಕದ್ದಲ್ಲ.

(3) ಕೆಟ್ಟುಹೋದ ವಾಹನ ಅಥವಾ ಮಕ್ಕಳ ಆಟಿಕೆಯ ವಾಹನ ಅಥವಾ ಹತ್ತು ವರ್ಷಕ್ಕಿಂತ ಕಡಿಮೆ ವಯೋಮಾನದ ವ್ಯಕ್ತಿಯು ನಡೆಸುವ ಸೈಕಲನ್ನು ಹೊರತುಪಡಿಸಿ, ಇತರ ಯಾವುದೇ ವಾಹನವು ಕಾಲುದಾರಿಯನ್ನು ಉಪಯೋಗಿಸತಕ್ಕದ್ದಲ್ಲ ಅಥವಾ ಅದನ್ನು ಅಲ್ಲಿ ನಿಲ್ಲಿಸತಕ್ಕದ್ದಲ್ಲ.

(4) ಯಾರೇ ವ್ಯಕ್ತಿಯು,–

(i) ಪಾದಚಾರಿಗಳು ದಾಟಲು ಅವಕಾಶ ಕಲ್ಪಿಸಿರುವಂಥ ದಾಟುವ ಸ್ಥಳದಲ್ಲಲ್ಲದೆ; ಅಥವಾ

(ii) ಸಂಚಾರವನ್ನು ನಿಯಂತ್ರಿಸುವ ಸ್ವಯಂ ಚಾಲಿತ ವಿದ್ಯುನ್ಮಾನ ಸಂಕೇತ ಸಾಧನವಿರುವ ಕಡೆಗಳಲ್ಲಿ ಪಾದಚಾರಿಗಳಿಗಾಗಿ ಹಸಿರು ಸಂಕೇತ ಕಾಣಿಸಿದಾಗಲ್ಲದೆ; ಅಥವಾ

(iii) ಕರ್ತವ್ಯದಲ್ಲಿರುವ ಪೊಲೀಸ್ ಅಧಿಕಾರಿಯ ನಿರ್ದೇಶನದ ಮೇಲಲ್ಲದೆ

– ರಸ್ತೆಯನ್ನು ದಾಟತಕ್ಕದ್ದಲ್ಲ.

**7. ಸಂಚಾರ ಪ್ರತ್ಯೇಕೀಕರಣ.–** ಯಾವುದೇ ರಸ್ತೆ ಅಥವಾ ಬೀದಿಯನ್ನು, ಸೈಕಲ್‌ಗಳಿಗೆ ಅಥವಾ ಇತರ ಯಾವುವೇ ವಾಹನಗಳು ಅಥವಾ ಯಾವುದೇ ನಿರ್ದಿಷ್ಟ ವರ್ಗದ ವಾಹನಕ್ಕೆ ಎಂದು ಮೀಸಲಿರಿಸಿ ಮಾರ್ಗಗಳನ್ನು ಕಲ್ಪಿಸಿರುವಲ್ಲಿ, ಯಾರೇ ವ್ಯಕ್ತಿಯು, ಆ ಸಮಯದಲ್ಲಿ ಹಾಜರಿರುವ ಪೊಲೀಸ್ ಅಧಿಕಾರಿಯ ಅನುಮತಿಯಿಲ್ಲದೆ ಈ ಮಾರ್ಗಗಳ ಮೇಲೆ ಇತರ ಯಾವುದೇ ರೀತಿಯ ವಾಹನಗಳನ್ನು ಚಾಲನೆ ಮಾಡತಕ್ಕದ್ದಲ್ಲ ಅಥವಾ ಇತರ ಯಾವುದೇ ನಿರ್ದಿಷ್ಟ ವರ್ಗದ ವಾಹನಕ್ಕಾಗಿ ಅಂಥ ಮಾರ್ಗಗಳನ್ನು ಬಳಸತಕ್ಕದ್ದಲ್ಲ.

**8. ಶ್ರವ್ಯ ಸಂಕೇತಗಳ ಬಳಕೆ.–** (1) ವಾಹನದ ಯಾರೇ ಚಾಲಕನು ಎಚ್ಚರಿಕೆ ನೀಡುವುದಕ್ಕಾಗಿ, ಯಾವುದೇ ವಾಹನದಲ್ಲಿ ಅಳವಡಿಸಲಾಗಿರುವ ಹಾರನ್ ಅಥವಾ ಇತರ ಯಾವುದೇ ಸಾಧನದಿಂದ ರಕ್ಷಣೆಯ ಅಗತ್ಯತೆಗೆ ಯುಕ್ತವಾಗಿರುವುದಕ್ಕಿಂತ ಹೆಚ್ಚಾಗಿ ಒಂದೆ ಸಮನೆ ಶಬ್ದ ಮಾಡತಕ್ಕದ್ದಲ್ಲ ಅಥವಾ ಇತರ ಯಾರೇ ವ್ಯಕ್ತಿಯು ಹಾಗೆ ನಿರಂತರ ಶಬ್ದ ಮಾಡುವಂತೆ ಮಾಡತಕ್ಕದ್ದಲ್ಲ ಅಥವಾ ಅದಕ್ಕೆ ಅವಕಾಶ ನೀಡತಕ್ಕದ್ದಲ್ಲ.

(2) ಬೆಂಗಳೂರು ನಗರದ ಪೊಲೀಸ್ ಆಯುಕ್ತ ಅಥವಾ ಇತರೆಡೆಯಲ್ಲಿ ಜಿಲ್ಲಾ ಮ್ಯಾಜಿಸ್ಟ್ರೇಟರು, ರಾಜ್ಯಪತ್ರದಲ್ಲಿ ಅಧಿಸೂಚನೆಯನ್ನು ಹೊರಡಿಸುವ ಮೂಲಕ ಮತ್ತು ಆ ಬಗ್ಗೆ ಸೂಕ್ತ ಸ್ಥಳಗಳಲ್ಲಿ ಸೂಚನಾ ಫಲಕಗಳನ್ನು ನಿಲ್ಲಿಸುವ ಮೂಲಕ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಪ್ರದೇಶದೊಳಗೆ ಮತ್ತು ಅಂಥ ಅವಧಿಯೊಳಗೆ, ಯಾವುದೇ ಹಾರನ್ ಅಥವಾ ಎಚ್ಚರಿಕೆ ನೀಡಲು ವಾಹನದಲ್ಲಿ ಅಳವಡಿಸಿರುವ ಇತರ ಸಾಧನದ ಬಳಕೆಯನ್ನು ನಿಷೇಧಿಸತಕ್ಕದ್ದು.

(3) (2) ನೇ ಉಪ ನಿಯಮದ ಅನುಸಾರವಾಗಿ ನಿಲ್ಲಿಸಬೇಕಾದ ಸೂಚನಾ ಫಲಕಗಳು ಇಂಗ್ಲೀಷ್ ಮತ್ತು ಕನ್ನಡ ಭಾಷೆಗಳಲ್ಲಿ ಇರತಕ್ಕದ್ದು.

**9. ವಾಹನಗಳಿಗೆ ಹೇರುವುದು.–** (1) ಯಾರೇ ವ್ಯಕ್ತಿಯು, ವಾಹನದ ತುದಿಯ ಆಚೆಗೆ ಚಾಚಿಕೊಂಡಿರಬಹುದಾದಂಥ ರೀತಿಯಲ್ಲಿ ಯಾವುದೇ ವಾಹನಕ್ಕೆ ಹೇರನ್ನು ತುಂಬತಕ್ಕದ್ದಲ್ಲ ಅಥವಾ ತುಂಬಲು ಅನುಮತಿಸತಕ್ಕದ್ದಲ್ಲ ಮತ್ತು ಯಾರೇ ವ್ಯಕ್ತಿಯು, ಇತರ ವಾಹನಗಳ ಸಂಚಾರಕ್ಕೆ ಅಥವಾ ಯಾರೇ ವ್ಯಕ್ತಿಗೆ ಅಪಾಯವಾಗುವಂಥ ರೀತಿಯಲ್ಲಿ ಯಾವುದೇ ಹೇರನ್ನು, ಯಾವುದೇ ವಾಹನದ ಮೇಲೆ

ತುಂಬಲು ಅನುಮತಿಸತಕ್ಕದ್ದಲ್ಲ . ಆದರೆ, ಗಾಡಿಗಳ ಸಂದರ್ಭದಲ್ಲಿ, ಹೇರು, ಎರಡು ಬದಿಗಳಲ್ಲೂ [1][0.305 ಮೀಟರ್][1] ಗಳಿಗಿಂತಲೂ ಹೆಚ್ಚಿಲ್ಲದಂತೆ ಹೊರಕ್ಕೆ ಚಾಚಿಕೊಂಡಿರಬಹುದು.

(2) ಯಾರೇ ವ್ಯಕ್ತಿಯು, ನಾಲ್ಕು ಚಕ್ರಗಳ ವಾಹನದಲ್ಲಿ [1][6.093 ಮೀಟರು][1] ಗಳಿಗಿಂತ ಉದ್ದವಾಗಿರುವ ಯಾವುದೇ ಹೇರು ಅಥವಾ ಮರಮಟ್ಟು ಅಥವಾ ಇತರೆ ವಸ್ತುಗಳನ್ನು ಕೊಂಡೊಯ್ಯುವುದನ್ನು ಹೊರತುಪಡಿಸಿ, ಯಾವುದೇ ಅಂಥ ಹೇರನ್ನು ಗಾಡಿಯ ಮೂಲಕ ಸಾಗಿಸತಕ್ಕದ್ದಲ್ಲ.

(3) ಯಾರೇ ವ್ಯಕ್ತಿಯು, ಯಾವುದೇ ವಾಹನದ ಹೇರನ್ನು ವಾಹನದ ಮುಂದಿನ ಭಾಗದ ಅಂಚಿಗೆ ಬರುವಂತೆ ಹೇರತಕ್ಕದ್ದಲ್ಲ ಅಥವಾ ಹೇರಲು ಅನುಮತಿಸತಕ್ಕದ್ದಲ್ಲ ಅಥವಾ ವಾಹನದ ಹಿಂದಿನ ಅಂಚಿನ ಆಚೆಗೆ [1][1.523 ಮೀಟರು][1] ಗಳಿಗಿಂತ ಆಚೆಗೆ ಚಾಚಿರುವಂತೆ ಹೇರನ್ನು ತುಂಬತಕ್ಕದ್ದಲ್ಲ ಅಥವಾ ಒಂದಕ್ಕಿಂತ ಹೆಚ್ಚಿನ ವಾಹನವನ್ನು ಉಪಯೋಗಿಸಿದಲ್ಲಿ ಅಂಥ ಕೊನೆಯ ವಾಹನದ ಹಿಂಬದಿಯ ಅಂಚಿನ ಆಚೆಗೆ [1][1.523 ಮೀಟರು][1]ಗಳಿಗಿಂತ ಹೆಚ್ಚಿನ ಅಂತರದಲ್ಲಿ ಹೇರನ್ನು ತುಂಬತಕ್ಕದ್ದಲ್ಲ.

**1. ಅಧಿಸೂಚನೆ ಸಂ.ಎಚ್‌ಡಿ 41 ಟಿಎಂಆರ್ 79, ದಿನಾಂಕ 9ನೇ ಜನವರಿ 1981ರ ಮೂಲಕ ಪ್ರತಿಯೋಜಿಸಲಾಗಿದೆ.**

(4) ಬೆಂಗಳೂರು ನಗರದಲ್ಲಿ ಪೊಲೀಸ್ ಆಯುಕ್ತರು ಮತ್ತು ಇತರೆಡೆಯಲ್ಲಿ ಜಿಲ್ಲಾ ಮ್ಯಾಜಿಸ್ಟ್ರೇಟರು, ಮೋಟಾರು ವಾಹನಗಳ ಅಧಿನಿಯಮ, 1939ರ ಅಡಿಯಲ್ಲಿ ರಚಿತವಾದ ಸಾರಿಗೆ ಪ್ರಾಧಿಕಾರದ ಸಹಮತಿಯೊಂದಿಗೆ ರಾಜ್ಯಪತ್ರದಲ್ಲಿ ಅಧಿಸೂಚನೆಯನ್ನು ಹೊರಡಿಸುವ ಮೂಲಕ, ಹೇರುವಿನ ಹೊರಚಾಚುವಿಕೆಗೆ ಸಂಬಂದಪಟ್ಟಂತೆ (1)ನೇ ಉಪ ನಿಯಮವನ್ನು ಮತ್ತು ಬೆಂಗಳೂರು ನಗರದಲ್ಲಿರುವ ಅಥವಾ ಸಂದರ್ಭಾನುಸಾರ ಜಿಲ್ಲೆಗಳ ಇತರ ಯಾವುದೇ ಕಡೆಯಲ್ಲಿರುವ ಎಲ್ಲ ಅಥವಾ ಯಾವುದೇ ನಿರ್ದಿಷ್ಟಪಡಿಸಿದ ರಸ್ತೆಗಳ ಮೇಲೆ ನಿರ್ದಿಷ್ಟಪಡಿಸಿದ ವಾಹನಗಳ ವರ್ಗಗಳಿಗೆ ಸಂಬಂಧಿಸಿದಂತೆ ನಿರ್ದಿಷ್ಟಪಡಿಸಿದ ಅವಧಿಯ ಸಮಯದಲ್ಲಿ (2) ಮತ್ತು (3) ನೇ ಉಪ ನಿಯಮಗಳನ್ನು ಸಡಿಲಿಸಬಹುದು.

(5) ವಾಹನದ ಅಥವಾ ಜೋಡಿಸಲಾಗಿರುವ ವಾಹನಗಳಲ್ಲಿ ಕೊನೆಯ ವಾಹನದ ಹಿಂದಿನ ತುದಿಯ ಆಚೆ [1][0.914 ಮೀಟರು][1] ಗಳಿಗಿಂತ ಹೆಚ್ಚಿಗೆ ಚಾಚಿಕೊಂಡಿರುವ ಯಾವುದೇ ಹೇರನ್ನು ಸಾಗಿಸುತ್ತಿದ್ದರೆ ಅಂಥ ಹೇರಿನ ಕೊನೆಗೆ,–

(i) ಸೂರ್ಯೋದಯದ ಒಂದು ಗಂಟೆಯ ತರುವಾಯ ಮತ್ತು ಸೂರ್ಯ ಮುಳುಗುವುದಕ್ಕೆ ಮುಂಚಿನ ಅರ್ಧ ಗಂಟೆ ಅವಧಿಯವರೆಗೆ [1][0.609 ಮೀಟರು X 0.609 ಮೀಟರುಗಳಿಗಿಂತ][1] ಕಡಿಮೆಯಿಲ್ಲದ ಉದ್ದಳತೆಯಿರುವ ಕೆಂಪು ಬಾವುಟವನ್ನು ಕಟ್ಟಿರತಕ್ಕದ್ದು.

(ii) ಇತರ ಸಮಯದಲ್ಲಿ, ವಾಹನದಲ್ಲಿ ಅಗತ್ಯಪಡಿಸಲಾದ ದೀಪಗಳ ಜೊತೆಗೆ, ವಾಹನದ ಹಿಂಭಾಗದಲ್ಲಿ ಕೆಂಪು ಬೆಳಕನ್ನು ತೋರಿಸುವ ದೀಪವನ್ನು ಬೆಳಗಿಸತಕ್ಕದ್ದು.

**1. ಅಧಿಸೂಚನೆ ಸಂ.ಎಚ್‌ಡಿ 41 ಟಿಎಂಆರ್ 79, ದಿನಾಂಕ 9ನೇ ಜನವರಿ 1981ರ ಮೂಲಕ ಪ್ರತಿಯೋಜಿಸಲಾಗಿದೆ.**

(6) ಬೆಂಗಳೂರು ನಗರದಲ್ಲಿ ಪೊಲೀಸ್ ಆಯುಕ್ತರು ಮತ್ತು ಇತೆರೆಡೆಯಲ್ಲಿ ಜಿಲ್ಲಾ ಮ್ಯಾಜಿಸ್ಟ್ರೇಟರು, ಸಾರಿಗೆ ಪ್ರಾಧಿಕಾರದ ಸಹಮತಿಯೊಂದಿಗೆ ಹೊರಡಿಸಿದ ಮತ್ತು ರಾಜ್ಯಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ ಈ ನಿಯಮವು ಅನ್ವಯಿಸುವಂಥ ರಸ್ತೆಗಳ ಮೇಲೆ ಎಪ್ಪತ್ತೈದು ಮಿಲಿ ಮೀಟರುಗಳಿಗಿಂತ ಕಡಿಮೆ ಅಗಲದ ಚಕ್ರವನ್ನು ಜೋಡಿಸಿರುವ ವಾಹನದಲ್ಲಿ ಅರ್ಧ ಮೆಟ್ರಿಕ್ ಟನ್ ತೂಕಕ್ಕಿಂತ ಹೆಚ್ಚಿನ ತೂಕದ ಯಾವುದೇ ಹೇರನ್ನು ಸಾಗಿಸತಕ್ಕದ್ದಲ್ಲ.

(7) ಹೇರನ್ನು ತುಂಬಿಸಿಕೊಳ್ಳುತ್ತಿರುವ ಅಥವಾ ಹೇರನ್ನು ಇಳಿಸುತ್ತಿರುವ ಪ್ರತಿಯೊಂದು ವಾಹನವನ್ನು, ರಸ್ತೆಯ ತೀರಾ ಎಡಭಾಗದಲ್ಲಿ ನಿಲ್ಲಿಸತಕ್ಕದ್ದು ಮತ್ತು ಸಾಧ್ಯವಾದರೆ ಚರಂಡಿಯ ಹೊರಭಾಗದಲ್ಲಿ ನಿಲ್ಲಿಸತಕ್ಕದ್ದು ಅಥವಾ ಪಕ್ಕದಲ್ಲಿ ಚರಂಡಿ ಇಲ್ಲದಿದ್ದರೆ, ರಸ್ತೆ ದಾರಿಯ ಆಚೆಗೆ ರಸ್ತೆಯ ಅಂಚಿನ ಜಾಗೆಯಲ್ಲಿ ನಿಲ್ಲಿಸತಕ್ಕದ್ದು.

10. **ಘಟನೆ ನಡೆದ ಸ್ಥಳಕ್ಕೆ ಹೋಗುತ್ತಿರುವ ರೋಗಿವಾಹನ ಮತ್ತು ಅಗ್ನಿ ಶಾಮಕ ದಳದ ವಾಹನಗಳಿಗೆ ಮಾರ್ಗವನ್ನು ಮುಕ್ತವಾಗಿ ನೀಡುವುದು.–** ಘಟನೆ ನಡೆದ ಯಾವುದೇ ಸ್ಥಳಕ್ಕೆ ಹೋಗುತ್ತಿರುವ ಅಗ್ನಿ ಶಾಮಕ ದಳದ ವಾಹನ ಅಥವಾ ರೋಗಿವಾಹನ ಬರುತ್ತಿದ್ದಂತೆ ಪ್ರತಿಯೊಬ್ಬ ವ್ಯಕ್ತಿಯು ಸ್ವತಃ ರಸ್ತೆಯ ಪಕ್ಕಕ್ಕೆ ಸರಿಯುವ ಮೂಲಕ ಮಾರ್ಗವನ್ನು ಮುಕ್ತಗೊಳಿಸತಕ್ಕದ್ದು.

11. **ಚಕ್ರಗಳ ಅಡ್ಡಾದಿಡ್ಡಿ ಚಲನೆ.–** ವಾಹನದ ಪ್ರಭಾರದಲ್ಲಿರುವ ಯಾರೇ ವ್ಯಕ್ತಿಯು, ಚಕ್ರಗಳ ಅಡ್ಡಾದಿಡ್ಡಿ ಚಲನೆಗೆ ಅವಕಾಶ ನೀಡತಕ್ಕದ್ದಲ್ಲ ಅಥವಾ [1][ಪ್ರಾಣಿಗಳ ಕಾಲುಗಳನ್ನು ವಾಹನಗಳ ಚಕ್ರಗಳಿಗೆ ಕಟ್ಟತಕ್ಕದ್ದಲ್ಲ][1].

**1. ಅಧಿಸೂಚನೆ ಸಂ.ಎಚ್‌ಡಿ 41 ಟಿಎಂಆರ್ 79, ದಿನಾಂಕ 9ನೇ ಜನವರಿ 1981ರ ಮೂಲಕ ಪ್ರತಿಯೋಜಿಸಲಾಗಿದೆ.**

12. **ಪ್ರಾಣಿಗಳ ನಿಯಂತ್ರಣ.–** ವಾಹನಕ್ಕೆ ಕಟ್ಟದೆ ಪ್ರಾಣಿಗಳನ್ನು ಕೊಂಡೊಯ್ಯುತ್ತಿರುವ ಅಥವಾ ಪ್ರಾಣಿಯ ಮೇಲೆ ಸವಾರಿ ಮಾಡುವ ಯಾರೇ ವ್ಯಕ್ತಿಯು, ಸ್ವತಃ ತಾನು ಅಂಥ ಪ್ರಾಣಿ ಅಥವಾ ಇತರ ವಾಹನದ ಮಧ್ಯೆ ಇರತಕ್ಕದ್ದು ಮತ್ತು ಅಂಥ ಪ್ರಾಣಿಯನ್ನು ರಸ್ತೆಯ ತೀರಾ ಎಡಭಾಗದಲ್ಲಿ ನಡೆಸಿಕೊಂಡು ಹೋಗತಕ್ಕದ್ದು.

13. **ಮಕ್ಕಳ ನಿಯಂತ್ರಣ.–** ಸೈಕಲ್ ಗೆ ಸಂಬಂಧಿಸಿದಂತೆ ಹತ್ತು ವರ್ಷ ವಯಸ್ಸಿಗಿಂತ ಕಡಿಮೆ ವಯಸ್ಸಿನ ಅಥವಾ ಇತರ ವಾಹನಗಳ ಸಂಬಂಧದಲ್ಲಿ [1][ಹದಿನೆಂಟು ವರ್ಷ][1]ಗಳಿಗಿಂತ ಕಡಿಮೆ ವಯಸ್ಸಿನ ಯಾರೇ ವ್ಯಕ್ತಿಯು, ಪಕ್ಕದ ಪಾದಾಚಾರಿ ರಸ್ತೆಯಲ್ಲಿ ಚಲಿಸಲು ಬಳಸುವ ಅಥವಾ ಅದಕ್ಕಾಗಿ ಬಳಸುತ್ತಿರುವ ವಾಹನವಲ್ಲದ ಇತರ ವಾಹನದ ಪ್ರಭಾರವನ್ನು ಅಥವಾ ನಿಯಂತ್ರಣವನ್ನು ಹೊಂದಿರತಕ್ಕದ್ದಲ್ಲ.

**1. ಅಧಿಸೂಚನೆ ಸಂ.ಎಚ್‌ಡಿ 41 ಟಿಎಂಆರ್ 79, ದಿನಾಂಕ 9ನೇ ಜನವರಿ 1981ರ ಮೂಲಕ ಪ್ರತಿಯೋಜಿಸಲಾಗಿದೆ.**

14. **ಸೈಕಲ್ ಸವಾರಿ.–** (1) ಯಾರೇ ವ್ಯಕ್ತಿಯು,–

(ಎ) ಸಾಕಷ್ಟು ವೇಗ ನಿಯಂತ್ರಕಗಳನ್ನು ಮತ್ತು ಗಂಟೆಯನ್ನು ಒದಗಿಸಿರುವ ಹೊರತು; ಅಥವಾ

(ಬಿ) ಯಾವುದೇ ರೀತಿಯಲ್ಲಿ ಆಸನವಿದ್ದ ಹೊರತು

– ರಸ್ತೆಯ ಮೇಲೆ ಸೈಕಲ್ ಸವಾರಿ ಮಾಡತಕ್ಕದ್ದಲ್ಲ.

(2) ಸ್ಥಳೀಯ ಪ್ರಾಧಿಕಾರದ ಯಾವುದೇ ಪ್ರದೇಶದೊಳಗೆ ಯಾವುದೇ ರಸ್ತೆಯ ಮೇಲೆ ಸೈಕಲ್ಲನ್ನು ಓಡಿಸುವ ಯಾರೇ ವ್ಯಕ್ತಿಯನ್ನು ಜೊತೆಗೆ ಒಯ್ಯುವ ಉದ್ದೇಶಕ್ಕೆ ವಿನ್ಯಾಸಗೊಳಿಸಿದ ಸೈಕಲ್‌ನ ಹೊರತಾಗಿ ಅಂಥ ಸೈಕಲ್ಲಿನ ಮೇಲೆ ಅದೇ ವೇಳೆಗೆ ಯಾರೇ ಇತರ ವ್ಯಕ್ತಿಯನ್ನು ಒಯ್ಯತಕ್ಕದ್ದಲ್ಲ.

(3) ಸೈಕಲ್ ಸವಾರರು, ಇಬ್ಬರು ಸರಿಸಮವಾಗಿ ಕುಳಿತುಕೊಂಡು ಸವಾರಿ ಮಾಡತಕ್ಕದ್ದಲ್ಲ ಮತ್ತು ರಸ್ತೆ ಅಥವಾ ಸಂಚಾರ ಸ್ಥಿತಿಗತಿಗಳು ಅಗತ್ಯಪಡಿಸಿದಾಗಲೆಲ್ಲಾ ಒಬ್ಬರೇ ಓಡಿಸತಕ್ಕದ್ದು.

15. **ವಾಹನಗಳ ಚಾಲಕರ ವಯೋಮಿತಿ.–** ಸೈಕಲನ್ನು ಹೊರತುಪಡಿಸಿ, ಹದಿನೆಂಟು ವರ್ಷ ವಯಸ್ಸಿನ ಒಳಗಿನ ಯಾರೇ ವ್ಯಕ್ತಿಯು ರಸ್ತೆಯ ಮೇಲೆ ವಾಹನವನ್ನು ಓಡಿಸತಕ್ಕದ್ದಲ್ಲ.

16. **ವಾಹನಗಳ ಮತ್ತು ಪ್ರಾಣಿಗಳ ಮೇಲೆ ಸಾಗಿಸುವ ಹೇರುಗಳ ತಪಾಸಣೆ.–** ಪೊಲೀಸ್ ಸಬ್‌ಇನ್ಸ್‌ಪೆಕ್ಟರನ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಯಾರೇ ಪೊಲೀಸ್ ಅಧಿಕಾರಿ ಅಥವಾ ಈ ಸಂಬಂಧದಲ್ಲಿ ರಾಜ್ಯ ಸರ್ಕಾರದಿಂದ ಅಧಿಕಾರ ಹೊಂದಿದ ಇತರ ಯಾರೇ ಅಧಿಕಾರಿಯು, ಯಾವುದೇ ಸಮಯದಲ್ಲಿ ಯಾವುದೇ ವಾಹನವು ಸಾರ್ವಜನಿಕ ಸ್ಥಳದಲ್ಲಿದ್ದರೆ, ವಾಹನವನ್ನು ನಿಲ್ಲಿಸುವಂತೆ ಮತ್ತು ವಾಹನದ ಒಳಗಿರುವ ವಸ್ತುಗಳನ್ನು ಸೂಕ್ತವಾಗಿ ಪರೀಕ್ಷಿಸಲು ಅವಶ್ಯವಾಗಬಹುದಾದಷ್ಟು ಸಮಯ ಅದನ್ನು ನಿಲ್ಲಿಸುವಂತೆ ಚಾಲಕನಿಗೆ ಕೇಳಬಹುದು.

17. **ಪ್ರಾಣಿಗಳಿಗೆ ಮೂಗು–ದಾರಗಳ ಬಳಕೆ.–** ಯಾವುದೇ ವಾಹನವನ್ನು ಎಳೆಯಲು ಬಳಸಲಾಗುವ ಪ್ರಾಣಿಗಳಿಗೆ, ಅಂಥ ಪ್ರಾಣಿಗಳ ಮೇಲೆ ಚಾಲಕನು ನಿಯಂತ್ರಣವನ್ನು ಹೊಂದಿರಲು ಸಾಧ್ಯವಾಗುವಂತೆ ಮೂಗುದಾರಗಳನ್ನು ಹಾಕಿರತಕ್ಕದ್ದು.

18. **ರಾತ್ರಿ ವೇಳೆಯಲ್ಲಿ ವಾಹನಗಳನ್ನು ಮತ್ತು ಪ್ರಾಣಿಗಳನ್ನು ನಡೆಸುವುದು.–** (1) ರಾತ್ರಿ ವೇಳೆಯಲ್ಲಿ ಸಾಕಷ್ಟು ಬೆಳಕಿಲ್ಲದಿರುವಾಗ ವಾಹನಗಳನ್ನು ಮತ್ತು ಪ್ರಾಣಿಗಳನ್ನು ಯಾವುದೇ ರಸ್ತೆಯ ಮೇಲೆ ಅಥವಾ ಸಾರ್ವಜನಿಕ ಸ್ಥಳಗಳಲ್ಲಿ ಚಾಲನೆ ಮಾಡತಕ್ಕದ್ದಲ್ಲ , ಹೇರತಕ್ಕದ್ದಲ್ಲ ಅಥವಾ ಮುನ್ನಡೆಸತಕ್ಕದ್ದಲ್ಲ.

(2) ರಸ್ತೆಯ ಮೇಲೆ ಚಲಿಸುತ್ತಿರುವ ವಾಹನದ ಯಾರೇ ಚಾಲಕನು ನಿದ್ರೆ ಮಾಡತಕ್ಕದ್ದಲ್ಲ ಅಥವಾ ಅನ್ಯಥಾ ವಾಹನದ ಚಲನೆಗಳ ಮೇಲೆ ಸೂಕ್ತ ನಿಯಂತ್ರಣ ಸಾಧಿಸಲು ನಿರ್ಲಕ್ಷಿಸತಕ್ಕದ್ದಲ್ಲ.

(3) (ಎ) ಪ್ರತಿಯೊಂದು ವಾಹನಕ್ಕೆ ನಿರ್ದಿಷ್ಟಪಡಿಸಿದ ದೀಪಗಳನ್ನು ರಾತ್ರಿ ವೇಳೆಯಲ್ಲಿ ಎಂದರೆ, ಸೂರ್ಯಾಸ್ತದ ಅರ್ಧ ಗಂಟೆ ತರುವಾಯ ಹಾಗೂ ಸೂರ್ಯೋದಯದ ಒಂದು ಗಂಟೆಗೆ ಮೊದಲು – ಈ ನಡುವಿನ ಅವಧಿಯಲ್ಲಿ ಬೆಳಗಿಸತಕ್ಕದ್ದು:

ಪರಂತು, ಪೊಲೀಸ್ ಮೇಲ್ವಿಚಾರಣೆಯಲ್ಲಿ ಅನೇಕ ವಾಹನಗಳನ್ನು ನಿಲ್ಲಿಸಿರುವಲ್ಲಿ ಎಲ್ಲ ವಾಹನಗಳ ದೀಪ ಬೆಳಗಿಸುವ ಅವಶ್ಯಕತೆ ಇರತಕ್ಕದ್ದಲ್ಲ. ಆದರೆ, ಹಾಜರಿರುವ ಪೊಲೀಸ್ ಅಧಿಕಾರಿಗಳು ತಮ್ಮ ವಿವೇಚನಾನುಸಾರ ಯಾವ ನಿರ್ದಿಷ್ಟ ವಾಹನ ಅಥವಾ ವಾಹನಗಳು ದೀಪ ಬೆಳಗಿಸಬೇಕೆಂಬುದನ್ನು ನಿರ್ಣಯಿಸತಕ್ಕದ್ದು.

(ಬಿ) ಕರ್ನಾಟಕ ಸಾರ್ವಜನಿಕ ವಾಹನಗಳ ಅಧಿನಿಯಮ, 1961 ಮತ್ತು ಅದರ ಅಡಿಯಲ್ಲಿ ರಚಿಸಲಾದ ನಿಯಮಗಳ ಅನುಸಾರ ನೋಂದಾಯಿತವಾಗಿರದ ಬೈಸಿಕಲ್ ಅಥವಾ ಟ್ರೈಸಿಕಲ್ ಅಥವಾ ಎತ್ತಿನ ಗಾಡಿ, ಕೈಗಾಡಿ – ಇವುಗಳನ್ನು ಹೊರತುಪಡಿಸಿ, ಪ್ರತಿಯೊಂದು ವಾಹನವು ವಾಹನದ ಎರಡೂ ಕಡೆ ಒಂದೊಂದರಂತೆ ಎರಡು ಬೆಳಗುವ ದೀಪಗಳನ್ನು ಹೊಂದಿರತಕ್ಕದ್ದು. ವಾಹನವು ಹೋಗುತ್ತಿರುವ ಅಥವಾ ಹೋಗಲು ಉದ್ದೇಶಿಸಿರುವ ದಿಕ್ಕಿನ ಮುಂಭಾಗದಲ್ಲಿ ಬಿಳಿ ದೀಪವನ್ನು ಬೆಳಗಿಸತಕ್ಕದ್ದು ಮತ್ತು ಅದು ವಾಹನದ ಪೂರ್ಣ ಅಗಲವನ್ನು ತೋರಿಸತಕ್ಕದ್ದು. ಈ ದೀಪಗಳನ್ನು ಹಿಂಭಾಗದಲ್ಲಿ ಕೆಂಪು ದುಂಡು ಕವಚದೊಂದಿಗೆ ಜೋಡಿಸಿರಬಹುದು. ಹಿಂಬದಿಯಲ್ಲಿ ಅಂಥ ದೀಪಗಳನ್ನು ಕೆಂಪು ದುಂಡು ಕವಚಗಳೊಂದಿಗೆ ಜೋಡಿಸಿಲ್ಲದಿದ್ದರೆ ಅಥವಾ ಯಾವುದಾದರೂ ಒಂದು ದೀಪದ ಕೆಂಪು ಕವಚವು ಅಸ್ಪಷ್ಟವಾಗಿದ್ದರೆ, ವಾಹನದ ಹಿಂಭಾಗದಲ್ಲಿ ಕೆಂಪು ದೀಪವನ್ನು ಪ್ರದರ್ಶಿಸಿ, ವಾಹನದ ಬಲ ಭಾಗದಲ್ಲಿ ಬೆಳಗುತ್ತಿರುವ ದೀಪವನ್ನು ಹೊಂದಿರತಕ್ಕದ್ದು.

(ಸಿ) ಪ್ರತಿಯೊಂದು ಬೈಸಿಕಲ್ ಅಥವಾ ಟ್ರೈಸಿಕಲ್ ಚಲಿಸುತ್ತಿರುವಾಗ, ಅದು ಚಲಿಸುತ್ತಿರುವ ದಿಕ್ಕಿನಲ್ಲಿ ಮುಂಭಾಗಕ್ಕೆ ಬಿಳಿ ದೀಪವನ್ನು ಬೆಳಗಿಸುವ ದೀಪವನ್ನು ಜೋಡಿಸಿಕೊಂಡಿರತಕ್ಕದ್ದು:

ಪರಂತು, ಮುಂದೆ ಎರಡು ಚಕ್ರಗಳಿರುವ ಟ್ರೈಸಿಕಲ್ ವಾಹನಕ್ಕೆ ಒಂದೊಂದು ಕಡೆ ಒಂದೊಂದರಂತೆ ಅದು ಚಲಿಸುತ್ತಿರುವ ದಿಕ್ಕಿನಲ್ಲಿ ಮುಂಭಾಗಕ್ಕೆ ಬಿಳಿ ದೀಪ ಬೆಳಗುವಂತೆ ಎರಡು ದೀಪಗಳನ್ನು ಜೋಡಿಸಿರತಕ್ಕದ್ದು:

ಮತ್ತೂ ಪರಂತು, ಒಂದು ಪ್ರತಿಫಲಕವನ್ನು ಜೋಡಿಸಿದ್ದರೆ, ಅದನ್ನು ವಾಹನಕ್ಕೆ ಲಂಬವಾಗಿ ನೆಲದಿಂದ [1][0.381 ಮೀಟರು][1] ಗಳ ಎತ್ತರದಲ್ಲಿ ಮತ್ತು ವಿಸ್ತೀರ್ಣದಲ್ಲಿ [1][0.774 ಚ. ಮೀಟರು][1] ಗಳಿಗಿಂತ ಕಡಿಮೆಯಲ್ಲದ ಬಿಳಿ ಮೇಲ್ಮೈ ಜಾಗದಲ್ಲಿ ಚೌಕಾಕಾರವಾಗಿ ಕಾಣುವಂತೆ ಹಿಂಭಾಗದಲ್ಲಿ ಜೋಡಿಸತಕ್ಕದ್ದು.

1. **ಅಧಿಸೂಚನೆ ಸಂ.ಎಚ್‌ಡಿ 41 ಟಿಎಂಆರ್ 79, ದಿನಾಂಕ 9ನೇ ಜನವರಿ 1981ರ ಮೂಲಕ ಪ್ರತಿಯೋಜಿಸಲಾಗಿದೆ.**

(ಡಿ) ಕರ್ನಾಟಕ ಸಾರ್ವಜನಿಕ ವಾಹನ ಅಧಿನಿಯಮ, 1961 ಮತ್ತು ಅದರ ಅಡಿಯಲ್ಲಿ ರಚಿಸಲಾದ ನಿಯಮಗಳ ಅನುಸಾರ ನೋಂದಾಯಿಸಿರದ ಪ್ರತಿಯೊಂದು ಎತ್ತಿನ ಗಾಡಿ ಮತ್ತು ಪ್ರತಿಯೊಂದು ಕೈಗಾಡಿಯು, ಮುಂಭಾಗದಿಂದ ಮತ್ತು ಹಿಂಭಾಗದಿಂದ ಗೋಚರವಾಗುವ ಹಾಗೆ ಇರಿಸಲಾದ ಬಿಳಿ ಬೆಳಕನ್ನು ಚೆಲ್ಲುವ ಒಂದೇ ಬೆಳಕಿನ ದೀಪವನ್ನು ಹೊಂದಿರತಕ್ಕದ್ದು.

(4) ಯಾವುದೇ ವಾಹನವು, ತಾನು ಸಾಗುತ್ತಿರುವ ಅಥವಾ ಸಾಗಲು ಉದ್ದೇಶಿಸಿರುವ ದಿಕ್ಕಿನಲ್ಲಿ ಕೆಂಪು ದೀಪವನ್ನು ಬೆಳಗಿಸತಕ್ಕದ್ದಲ್ಲ.

(5) ಯಾವುವೇ ವಾಹನಗಳು ಪೆಟ್ರೋಲ್‌ನಿಂದ ಅಥವಾ ಸೀಮೆ ಎಣ್ಣೆಯಿಂದ ಅಥವಾ ಅಸಿಟಿಲೈನ್ ಅನಿಲದಿಂದ ಉರಿಯುವ ಅಥವಾ ವಿದ್ಯುಚ್ಛಕ್ತಿಯ ಒತ್ತಡದಲ್ಲಿ ಉರಿಯುವ ಲ್ಯಾಂಪ್‌ಗಳ ಅಂಥ ದೀಪಗಳನ್ನು, ಯಾವುದೇ ದಿಕ್ಕಿನಿಂದ ಹೊರಬರುವ ಬೆಳಕಿನ ಬಿಂಬವು ಕೆಳಮುಖವಾಗಿರುವಂತೆ ಅಥವಾ ಅದು ಎಲ್ಲ ಸಮಯಗಳಲ್ಲಿ, ದೀಪದಿಂದ [1][0.776 ಮೀಟರು][1] ಗಳಿಗಿಂತ ಹೆಚ್ಚು ದೂರದಲ್ಲಿ ವಾಹನದ ಅದೇ ಜಾಗದಲ್ಲಿ ಸಮತಲ ನಿಂತಿರುವ ಯಾರೇ ವ್ಯಕ್ತಿಗೆ ಕಣ್ಣು ಕೋರೈಸುವಂಥ ಬೆಳಕನ್ನು ನೀಡಲಾಗದಷ್ಟರ ಮಟ್ಟಿಗೆ ಅಥವಾ ಯಾರ ಕಣ್ಣಿನ ದೃಷ್ಟಿಯಲ್ಲಿ ಮೈದಾನದಿಂದ ಮೇಲೆ [1][1.066 ಮೀಟರು][1] ಗಳಿಗಿಂತ ಕಡಿಮೆ ಇರುವುದಿಲ್ಲವೋ ಅಷ್ಟರ ಮಟ್ಟಿಗೆ ಮರೆ ಮಾಡುವಂತೆ ನಿರ್ಮಿಸಿದ, ಜೋಡಿಸಿದ ಮತ್ತು ನಿರ್ವಹಿಸಿದ ಹೊರತಾಗಿ ಒಯ್ಯತಕ್ಕದ್ದಲ್ಲ.

**1. ಅಧಿಸೂಚನೆ ಸಂ.ಎಚ್‌ಡಿ 41 ಟಿಎಂಆರ್ 79, ದಿನಾಂಕ 9ನೇ ಜನವರಿ 1981ರ ಮೂಲಕ ಪ್ರತಿಯೋಜಿಸಲಾಗಿದೆ.**

(6) ಪ್ರತಿಯೊಂದು ವಾಹನಕ್ಕೆ ಹಿಂಭಾಗದ ಎರಡು ತುದಿಗಳಲ್ಲಿ ಹಿಂಭಾಗಕ್ಕೆ ಚೌಕಾಕಾರವಾಗಿ ಎರಡು ಕೆಂಪು ಪ್ರತಿಫಲಕಗಳನ್ನು ಜೋಡಿಸಿರತಕ್ಕದ್ದು:

ಪರಂತು, ಬೈಸಿಕಲ್ ಅಥವಾ ಮುಂಭಾಗದಲ್ಲಿ ಎರಡು ಚಕ್ರವಿರುವ ಟ್ರೈಸಿಕಲ್ ವಾಹನದ ಸಂಬಂಧದಲ್ಲಿ ಕೇವಲ ಒಂದು ಪ್ರತಿಫಲಕವನ್ನು ಮಾತ್ರ ಜೋಡಿಸತಕ್ಕದ್ದು.

(7) ಹೆದ್ದಾರಿಯಲ್ಲಿ ಎತ್ತುಗಳು ಎಳೆಯಲಾಗುವ ಪ್ರತಿಯೊಂದು ಸರಕು ಗಾಡಿಯ ಚಾಲಕನು, ನಿಧಾನ ಗತಿಯಲ್ಲಿ ಸಾಗತಕ್ಕದ್ದು ಮತ್ತು ಚಾಲಕನಿಗೆ ಅಂಥ ಎತ್ತುಗಳ ಮೇಲೆ ಪರಿಣಾಮಕಾರಿಯಾದ ನಿಯಂತ್ರಣಕ್ಕೆ ಅನುಕೂಲವಾಗುವ ಸಾಕಷ್ಟು ಉದ್ದವಾದ ಮೂಗುದಾರಗಳನ್ನು ಕಟ್ಟಿರತಕ್ಕದ್ದು.

**19. ಸಂಚಾರಕ್ಕೆ ಉಂಟಾಗುವ ಅಪಾಯವನ್ನು ತಡೆಗಟ್ಟುವುದು.–** ಯಾರೇ ವ್ಯಕ್ತಿಯು,–

(ಎ) ಯುಕ್ತ ಕಾರಣವಿಲ್ಲದೆ, ರಸ್ತೆಯ ಹಿಂಭಾಗದಲ್ಲಿ ಅಥವಾ ಎಡಭಾಗದಲ್ಲಿ ಯಾವುದೇ ವಾಹನವನ್ನು ಅನ್ಯಥಾ ಚಲಿಸತಕ್ಕದ್ದಲ್ಲ, ಎಳೆಯತಕ್ಕದ್ದಲ್ಲ ಅಥವಾ ನೂಕತಕ್ಕದ್ದಲ್ಲ, ಯಾವುದೇ ವಾಹನವನ್ನು ಅದರ ಬಲಭಾಗದ ಹೊರತಾಗಿ ಮತ್ತು ಬೆಂಗಳೂರು ನಗರದಲ್ಲಿ ಪೊಲೀಸ್ ಆಯುಕ್ತರು ಹಾಗೂ ಇತರ ಕಡೆಯಲ್ಲಿ ಸಂಬಂಧಪಟ್ಟ ಜಿಲ್ಲಾ ಮ್ಯಾಜಿಸ್ಟ್ರೇಟರು ಅಧಿಸೂಚನೆಯ ಮೂಲಕ ನಿಗದಿಪಡಿಸಬಹುದಾದ ವೇಗಕ್ಕಿಂತ ಹೆಚ್ಚಿನ ವೇಗದಲ್ಲಿ ಓಡಿಸತಕ್ಕದ್ದಲ್ಲ;

(ಬಿ) ಯಾವುದೇ ವಾಹನ ಅಥವಾ ಪ್ರಾಣಿಯನ್ನು ಸಾಕಷ್ಟು ಉಸ್ತುವಾರಿಯಿಲ್ಲದೆ ಮತ್ತು ಸುರಕ್ಷೆಯಿಲ್ಲದೆ ಯಾವುದೇ ರಸ್ತೆಯಲ್ಲಿ ಬಿಡತಕ್ಕದ್ದಲ್ಲ;

(ಸಿ) ಯಾವುದೇ ಪ್ರಾಣಿ ಅಥವಾ ವಾಹನದ ಚಾಲನೆಯಲ್ಲಿ, ನಿರ್ವಹಣೆಯಲ್ಲಿ ಅಥವಾ ಗಮನ ನೀಡುವಲ್ಲಿ ಯಾವುದೇ ರೀತಿಯ ದುರ್ನಡತೆ, ನಿರ್ಲಕ್ಷ್ಯ ಅಥವಾ ದುರ್ಬಳಕೆಯ ಮೂಲಕ ಯಾವುದೇ ರಸ್ತೆಯಲ್ಲಿ ಅಡಚಣೆ, ಹಾನಿ, ಅಪಾಯ ಅಥವಾ ತೊಂದರೆ ಉಂಟು ಮಾಡತಕ್ಕದ್ದಲ್ಲ ಅಥವಾ ಬೆಂಗಳೂರು ನಗರದಲ್ಲಿ ಪೊಲೀಸ್ ಆಯುಕ್ತರಿಂದ ಮತ್ತು ಇತರ ಕಡೆಯಲ್ಲಿ ಸಂಬಂಧಪಟ್ಟ ಮ್ಯಾಜಿಸ್ಟ್ರೇಟರಿಂದ ಈ ಸಂಬಂಧವಾಗಿ ಹೊರಡಿಸಲಾದ ಮತ್ತು ಪ್ರಕಟಿಸಲಾದ ಯಾವುದೇ ವಿನಿಯಮಕ್ಕೆ ವಿರುದ್ಧವಾಗಿ, ಮರಮುಟ್ಟು, ಕಂಬಗಳು ಅಥವಾ ಇತರ ಅಡ್ಡಾದಿಡ್ಡಿಯಾಗಿ ವಸ್ತುಗಳನ್ನು ಹೇರಿಕೊಂಡು ಯಾವುದೇ ವಾಹನ ಅಥವಾ ಪ್ರಾಣಿಯನ್ನು ರಸ್ತೆಯ ಮೇಲೆ ಚಲಿಸತಕ್ಕದ್ದಲ್ಲ;

(ಡಿ) ಯಾವುದೇ ಬೀದಿಯಲ್ಲಿ , ಯಾವುದೇ ಪ್ರಾಣಿಯನ್ನು ಅಥವಾ ವಾಹನವನ್ನು ಬಾಡಿಗೆಗಾಗಿ ಬಿಡತಕ್ಕದ್ದಲ್ಲ ಅಥವಾ ಅವುಗಳ ಮಾರಾಟಕ್ಕಾಗಿ ಇಡತಕ್ಕದ್ದಲ್ಲ; ಯಾವುದೇ ಪೀಠೋಪಕರಣ ಅಥವಾ ವಾಹನವನ್ನು ಶುಚಿಗೊಳಿಸತಕ್ಕದ್ದಲ್ಲ ಅಥವಾ ಯಾವುದೇ ಕುದುರೆ ಅಥವಾ ಪ್ರಾಣಿಗೆ ಮಾಲೀಸು ಮಾಡತಕ್ಕದ್ದಲ್ಲ, ತರಬೇತಿ ನೀಡತಕ್ಕದ್ದಲ್ಲ ಅಥವಾ ಪಳಗಿಸತಕ್ಕದ್ದಲ್ಲ ಅಥವಾ ಯಾವುದೇ ವಾಹನ ಅಥವಾ ವಾಹನದ ಯಾವುದೇ ಭಾಗವನ್ನು (ಅಪಘಾತ ಉಂಟಾದಾಗ ಸ್ಥಳದಲ್ಲಿಯೇ ದುರಸ್ತಿಗೊಳಿಸುವುದು ಅವಶ್ಯವಿದ್ದ ಸಂದರ್ಭವನ್ನು ಹೊರತುಪಡಿಸಿ) ತಯಾರು ಮಾಡತಕ್ಕದ್ದಲ್ಲ ಅಥವಾ ದುರಸ್ತಿಗೊಳಿಸತಕ್ಕದ್ದಲ್ಲ; ಅಥವಾ ಅದರಲ್ಲಿ ಸಂಚಾರಕ್ಕೆ ತೀವ್ರ ತೊಂದರೆಯುಂಟಾಗುವಂಥ ಅಥವಾ ನಿವಾಸಿಗಳಿಗೆ ಅಥವಾ ಸಾರ್ವಜನಿಕರಿಗೆ ತೀವ್ರ ಸ್ವರೂಪದ ಕಿರುಕುಳ ಉಂಟು ಮಾಡುವ ಯಾವುದೇ ತಯಾರಿಕೆಯನ್ನು ಅಥವಾ ಕಾರ್ಯಾಚರಣೆಯನ್ನು ಮಾಡತಕ್ಕದ್ದಲ್ಲ;

(ಇ) ಯಾವುದೇ ಬೀದಿಯಲ್ಲಿ, ಯಾವುದೇ ಪ್ರಾಣಿಯನ್ನು ಬಿಗಿದುಕಟ್ಟುವ ಮೂಲಕ ಅಥವಾ ಬೀದಿಯ ಯಾವುದೇ ಭಾಗವನ್ನು, ಪ್ರಾಣಿಯನ್ನು ನಿಲ್ಲಿಸುವ ಸ್ಥಳವಾಗಿ ಬಳಸುವ ಮೂಲಕ ಅಥವಾ ದೀರ್ಘ ಕಾಲದವರೆಗೆ ಬೀದಿಯಲ್ಲಿ ಅಥವಾ ರಸ್ತೆಯ ಮೇಲೆ ಯಾವುದೇ ಪೆಟ್ಟಿಗೆ, ಪಿಂಡಿ, ಗಂಟುಮೂಟೆ ಅಥವಾ ಇತರ ಯಾವುವೇ ವಸ್ತುಗಳನ್ನು ಇಡುವ ಮೂಲಕ ಅಲ್ಲಿ ಅಡಚಣೆಯನ್ನುಂಟು ಮಾಡತಕ್ಕದ್ದಲ್ಲ; ಅಥವಾ

(ಎಫ್) ಬೆಂಗಳೂರು ನಗರದಲ್ಲಿ ಪೊಲೀಸ್ ಆಯುಕ್ತರು ಮತ್ತು ಇತರೆಡೆಯಲ್ಲಿ ಸಂಬಂಧಪಟ್ಟ ಜಿಲ್ಲಾ ಮ್ಯಾಜಿಸ್ಟ್ರೇಟರು ಹೊರಡಿಸಿದ ಮತ್ತು ಪ್ರಕಟಿಸಿದ ಯಾವುದೇ ವಿನಿಯಮಕ್ಕೆ ವಿರುದ್ಧವಾಗಿ ಯಾವುದೇ ಅಂಗಡಿ, ಗೂಡಂಗಡಿ, ಪೆಟ್ಟಿಗೆ ಅಂಗಡಿ, ಮರದ

ಪೀಪಾಯಿ , ಬುಟ್ಟಿಗಳಲ್ಲಿ ಮಾರಾಟಕ್ಕಾಗಿ ಯಾವುದನ್ನಾದರೂ ಪ್ರದರ್ಶಿಸುವ ಮೂಲಕ ಅಥವಾ ಮಾರಾಟಕ್ಕಾಗಿ ಏನನ್ನಾದರೂ ಇಡುವ ಮೂಲಕ ಅಡಚಣೆಯನ್ನುಂಟು ಮಾಡತಕ್ಕದ್ದಲ್ಲ.

**20. ಬೆಟ್ಟ ಏರುತ್ತಿರುವ ವಾಹನಕ್ಕೆ ಆದ್ಯತೆ ನೀಡುವುದು.–** ಸಾಕಷ್ಟು ಅಗಲವಿಲ್ಲದ ಘಟ್ಟದ ರಸ್ತೆಯಲ್ಲಿ ವಾಹನಗಳು ಯಾವುದೇ ಅಪಾಯವಿಲ್ಲದೆ ಪರಸ್ಪರ ಮುಕ್ತವಾಗಿ ಹಾದುಹೋಗಲು ಬೆಟ್ಟ ಇಳಿಯುವ ವಾಹನವನ್ನು ನಡೆಸುವ ಯಾರೇ ವ್ಯಕ್ತಿಯು, ಬೆಟ್ಟದ ಮೇಲೇರುವ ವಾಹನಕ್ಕೆ ಆದ್ಯತೆ ನೀಡತಕ್ಕದ್ದು.

**21. ವಾಹನಗಳ ಪ್ರಯೋಗಾರ್ಥವಾಗಿ ಸಾರ್ವಜನಿಕ ಉದ್ಯಾನವನಗಳು, ಇತ್ಯಾದಿಗಳನ್ನು ಬಳಸುವುದು.–** (ಎ) ಬೆಂಗಳೂರು ನಗರ ಪೊಲೀಸ್ ಆಯುಕ್ತರು ಮತ್ತು ಇತರೆಡೆ ಸಂಬಂಧಿಸಿದ ಜಿಲ್ಲಾ ಮ್ಯಾಜಿಸ್ಟ್ರೇಟರು ಯಾವುದೇ ಸಾರ್ವಜನಿಕ ಉದ್ಯಾನ, ಉಪವನ ಅಥವಾ ಸಾರ್ವಜನಿಕ ಸ್ಥಳಗಳನ್ನು ವಾಹನಗಳ ಅಥವಾ ವಾಹನ ವರ್ಗಗಳ ಪ್ರಯೋಗಾರ್ಥ ಪರೀಕ್ಷಾರ್ಥಕ್ಕಾಗಿ ಬಳಸುವುದನ್ನು ನಿಷೇಧಿಸಲಾಗಿದೆ ಎನ್ನುವುದನ್ನು ಅಧಿಸೂಚನೆಯ ಮೂಲಕ ಯಾವ ಪ್ರದೇಶಗಳ ಪ್ರವೇಶ ದ್ವಾರದಲ್ಲಿ ಪ್ರಕಟಿಸಲಾಗಿದೆಯೋ ಅಂಥ ಕಡೆಗಳಲ್ಲಿ, ಯಾವ ವ್ಯಕ್ತಿಯು ಯಾವುದೇ ವಾಹನವನ್ನು ಅಥವಾ ವಾಹನ ವರ್ಗವನ್ನು ಆ ಉದ್ದೇಶಕ್ಕಾಗಿ ಬಳಸತಕ್ಕದ್ದಲ್ಲ ಅಥವಾ ಬಳಸುವಂತೆ ಮಾಡತಕ್ಕದ್ದಲ್ಲ ಅಥವಾ ಬಳಸಲು ಅವಕಾಶ ನೀಡತಕ್ಕದ್ದಲ್ಲ.

(ಬಿ) ಅಂಥ ಉದ್ಯಾನವನ, ಉಪವನ ಅಥವಾ ಇತರ ಸಾರ್ವಜನಿಕ ಸ್ಥಳದ ಪ್ರವೇಶ ದ್ವಾರದಲ್ಲಿ ಆ ಉದ್ದೇಶಕ್ಕಾಗಿ ನಿಲ್ಲಿಸಲಾದ ಸೂಚನಾ ಫಲಕದ ಮೇಲೆ ಎದ್ದುಕಾಣುವ ಹಾಗೆ, ಅಂಥ ಪ್ರತಿಯೊಂದು ಅಧಿಸೂಚನೆಯನ್ನು ಇಂಗ್ಲೀಷ್ ಮತ್ತು ಕನ್ನಡ ಭಾಷೆಯಲ್ಲಿ ಪ್ರದರ್ಶಿಸತಕ್ಕದ್ದು.

**22. ಪೊಲೀಸು ಅಧಿಕಾರಿಗಳು ನೀಡಬೇಕಾಗಿರುವ ಸಂಕೇತಗಳು.–** ಸಂಚಾರ ನಿಯಂತ್ರಣದ ಪ್ರಭಾರದಲ್ಲಿರುವ ಪೊಲೀಸು ಅಧಿಕಾರಿಯು ನೀಡಬೇಕಾಗಿರುವ ಸಂಕೇತಗಳು ಅನುಸೂಚಿ–I ರಲ್ಲಿರುವಂತಿರತಕ್ಕದ್ದು.

## ಅಧ್ಯಾಯ–III

## ವಾಹನಗಳ ನಿರ್ಮಾಣ, ಸಜ್ಜುಗೊಳಿಸುವಿಕೆ ಮತ್ತು ನಿರ್ವಹಣೆ

**23. ವಾಹನಗಳ ಅಗಲ, ಎತ್ತರ ಮತ್ತು ಉದ್ದ.–** (1) ಒಂದು ಜಟಕಾ ಅಥವಾ ಒಂದು ಟಾಂಗಾ, ಅದರ ಅಂಗ ಭಾಗಗಳು ಮತ್ತು ಜೋಡಣೆಗಳೂ ಸೇರಿದಂತೆ ಅದರ ನಿರ್ಮಾಣದಲ್ಲಿ ಈ ಮುಂದಿನ ಅಳತೆ ಪ್ರಮಾಣಗಳಿಗಿಂತ ಹೆಚ್ಚಿರತಕ್ಕದ್ದಲ್ಲ:

| | | **ಗರಿಷ್ಠ ಮಿತಿ** |
|---|---|---|
| ಒಟ್ಟಾರೆ ಉದ್ದ | --- | 3 ಮೀಟರುಗಳು |
| ಒಟ್ಟಾರೆ ಅಗಲ | --- | 1.55 ಮೀಟರುಗಳು |
| ಒಟ್ಟಾರೆ ಎತ್ತರ | --- | 1.85 ಮೀಟರುಗಳು |

(2) ಒಂದು ಜಟಕಾ ಅಥವಾ ಒಂದು ಟಾಂಗಾವಲ್ಲದ ಯಾವುದೇ ಇತರ ವಾಹನವು, ಅದರ ಅಂಗಭಾಗಗಳು ಮತ್ತು ಜೋಡಣೆಗಳೂ ಸೇರಿದಂತೆ ಅದರ ನಿರ್ಮಾಣದಲ್ಲಿ ಈ ಮುಂದಿನ ಅಳತೆ ಪ್ರಮಾಣಗಳನ್ನು ಮೀರತಕ್ಕದ್ದಲ್ಲ.

| | | **ಗರಿಷ್ಠ ಮಿತಿ** |
|---|---|---|
| ಒಟ್ಟಾರೆ ಉದ್ದ | --- | 4.2 ಮೀಟರುಗಳು |
| ಒಟ್ಟಾರೆ ಅಗಲ | --- | 1.65 ಮೀಟರುಗಳು |
| ಒಟ್ಟಾರೆ ಎತ್ತರ | --- | 2.7 ಮೀಟರುಗಳು |

**ಟಿಪ್ಪಣಿ:–** ಒಟ್ಟಾರೆ ಉದ್ದ ಎಂದರೆ ವಾಹನವು ಸಜ್ಜುಗೊಳಿಸದೆ ಇರುವಾಗಿನ ವಾಹನದ ಆಕಾರದ ಉದ್ದ.

**24. ಚಕ್ರಗಳ ಮತ್ತು ಟೈರುಗಳ ಗಾತ್ರ, ಸ್ವರೂಪ ಮತ್ತು ಸ್ಥಿತಿ.–** (1) ಟಾಂಗಾಗಳು ಮತ್ತು ಜಟಕಾಗಳು, ಟೊಳ್ಳು ರಿಮ್ಮುಗಳ ಮೇಲೆ ಗಟ್ಟಿಯಾದ ರಬ್ಬರಿನ ಟೈರುಗಳನ್ನು ಜೋಡಿಸಲಾದ ಒರಟಾದ ಚಕ್ರಗಳನ್ನು ಹೊಂದಿರತಕ್ಕದ್ದು ಮತ್ತು ಚಕ್ರಗಳ ಒಟ್ಟಾರೆ ವ್ಯಾಸವು 1.275 ಮೀಟರುಗಳನ್ನು ಮೀರಿರತಕ್ಕದ್ದಲ್ಲ.

(2) ಇತರ ಯಾವುದೇ ವಾಹನದ ಚಕ್ರಗಳ ವ್ಯಾಸವು 1.5 ಮೀಟರುಗಳನ್ನು ಮೀರಿರತಕ್ಕದ್ದಲ್ಲ.

**25. ಬ್ರೇಕುಗಳು.–** ಯಾರೇ ವ್ಯಕ್ತಿಯು, ಬ್ರೇಕ್ ಕೆಲಸ ಮಾಡುವ ಚಕ್ರದ ಟೈರುಗಳ ಹೊರಭಾಗದ ಅಂಚಿನ ಎರಡೂ ಬದಿಯ ಮೇಲೆ [1][0.152 ಮೀಟರು][1]ಗಳಿಗಿಂತ ಹೆಚ್ಚಿಗೆ ಮುಂಚಾಚಿರುವ ಬ್ರೇಕುಗಳು ಇರುವ ಯಾವುದೇ ವಾಹನವನ್ನು ಚಾಲನೆ ಮಾಡತಕ್ಕದ್ದಲ್ಲ ಅಥವಾ ಚಾಲನೆ ಮಾಡುವಂತೆ ಮಾಡತಕ್ಕದ್ದಲ್ಲ.

**1. ಅಧಿಸೂಚನೆ ಸಂ.ಎಚ್‌ಡಿ 41 ಟಿಎಂಆರ್ 19, ದಿನಾಂಕ 9ನೇ ಜನವರಿ 1981ರ ಮೂಲಕ ಪ್ರತಿಯೋಜಿಸಲಾಗಿದೆ.**

**26. ಎಚ್ಚರಿಕೆ ಸಾಧನ.–** (1) ಮೋಟಾರು ವಾಹನದ ಹೊರತಾದ ವಾಹನದ ಚಾಲಕ ಅಥವಾ ಸವಾರಿ ಮಾಡುವ ವ್ಯಕ್ತಿಯು ಯಾವುದೇ ವಿದ್ಯುತ್ ತುತ್ತೂರಿ ಅಥವಾ ಸೈರನನ್ನು ಬಳಸತಕ್ಕದ್ದಲ್ಲ.

(2) ಸ್ಪ್ರಿಂಗ್ ಇಲ್ಲದ ಚಕ್ರ ಇರುವ ವಾಹನಗಳ ಹೊರತು ಪ್ರತಿಯೊಂದು ವಾಹನಕ್ಕೆ ಕೈಯಿಂದ ನಿರ್ವಹಿಸುವ ಒಂದು ಗಂಟೆ ಅಥವಾ ತುತ್ತೂರಿ ಅಳವಡಿಸತಕ್ಕದ್ದು.

**27. ವಾಹನಗಳ ತಪಾಸಣೆ.–** ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಪ್ರಾಧಿಕಾರಿಗಳು, ಸಾರ್ವಜನಿಕ ಸ್ಥಳಗಳಲ್ಲಿರುವ ವಾಹನಗಳನ್ನು ಯಾವುದೇ ಸಮಯದಲ್ಲಿ, ವಾಹನವನ್ನು ನಿಲ್ಲಿಸುವಂತೆ ಮತ್ತು ವಾಹನವನ್ನು ಸೂಕ್ತವಾಗಿ ಪರೀಕ್ಷಿಸಲು ಅವಶ್ಯವಾಗಬಹುದಾದಷ್ಟು ಸಮಯ ಅದನ್ನು ನಿಲ್ಲಿಸುವಂತೆ ಚಾಲಕನನ್ನು ಕೇಳಬಹುದು.

**28. ಅನುಮತಿಸಲಾದ ದರಪಟ್ಟಿ, ಇತ್ಯಾದಿಗಳನ್ನು ಪ್ರದರ್ಶಿಸುವುದು.–** (1) ಸ್ಪ್ರಿಂಗ್ ಗಳಿರುವ ಪ್ರತಿಯೊಂದು ಸಾರ್ವಜನಿಕ ವಾಹನವು ಅಂಥ ವಾಹನಗಳ ರಿಮ್ಮುಗಳ ಸಮೀಪ ಮೇಲ್ಭಾಗದಲ್ಲಿ ಕಾರ್ಯನಿರ್ವಹಿಸುವ ಕೋಚ್ ಎರಡೂ ಬದಿಗಳ ಮೇಲೆ ಅನುಮತಿ ಪತ್ರ ಸಂಖ್ಯೆಯನ್ನು ಪ್ರದರ್ಶಿಸತಕ್ಕದ್ದು.

(2) ಸ್ಪ್ರಿಂಗ್‌ಗಳಿಲ್ಲದ ಪ್ರತಿಯೊಂದು ಸಾರ್ವಜನಿಕ ವಾಹನದ ಅಚ್ಚಿನ ಮೇಲೆ ಈಚೆಗಿನ ಮರದ ದಿಮ್ಮಿಯ ಪಕ್ಕದ ಹಿಂಭಾಗದ ಮೇಲೆ ಆ ವಾಹನದ ಅನುಮತಿ ಪತ್ರದ ಸಂಖ್ಯೆಯನ್ನು ಪ್ರದರ್ಶಿಸತಕ್ಕದ್ದು.

(3) ಅನುಮತಿ ಪತ್ರದ ಸಂಖ್ಯೆಗೆ ಸಂಕೇತಾಕ್ಷರಗಳು ಯಾವುವಾದರೂ ಇದ್ದರೆ, ಅವುಗಳನ್ನು [1][0.152 ಮೀಟರುಗಳು x 0.102 ಮೀಟರಗಳ][1] ಉದ್ದಗಲದ ಪ್ರಮಾಣದ ಬಿಳಿಬಣ್ಣದ ಹಿನ್ನೆಲೆಯಲ್ಲಿ ಕಪ್ಪು ಅಕ್ಷರಗಳಲ್ಲಿ ಬರೆಯತಕ್ಕದ್ದು.

**1. ಅಧಿಸೂಚನೆ ಸಂ.ಎಚ್‌ಡಿ 41 ಟಿಎಂಆರ್ 79, ದಿನಾಂಕ 9ನೇ ಜನವರಿ 1981ರ ಮೂಲಕ ಪ್ರತಿಯೋಜಿಸಲಾಗಿದೆ.**

(4) ಪ್ರತಿಯೊಂದು ಸಾರ್ವಜನಿಕ ವಾಹನದಲ್ಲಿ, ವಾಹನದ ಒಳಗೆ ಮತ್ತು ಪ್ರಯಾಣಿಕರಿಗೆ ಕಾಣಿಸುವ ಹಾಗೆ ಗಾಜಿನ ಚೌಕಟ್ಟಿನೊಳಗೆ ದರ ಪಟ್ಟಿಯನ್ನು ಪ್ರದರ್ಶಿಸತಕ್ಕದ್ದು.

**29. ನಿರಸನ ಮತ್ತು ಉಳಿಸುವಿಕೆಗಳು.–** ಅಧಿನಿಯಮದ 24 ನೇ ಪ್ರಕರಣದಿಂದ ನಿರಸಿತಗೊಂಡ ಯಾವುದೇ ಅಧಿನಿಯಮಿತಿಯ ಅಡಿಯಲ್ಲಿ ರಚಿಸಲಾದ, ಪೂರ್ವೋಕ್ತ ನಿಯಮಗಳಿಗೆ ಸಂವಾದಿಯಾದ ಯಾವುವೇ ನಿಯಮಗಳು ಈ ಮೂಲಕ ನಿರಸಿತಗೊಂಡಿವೆ:

ಪರಂತು, ನಿರಸನವು,– ಈ ಮುಂದಿನವುಗಳನ್ನು, ಎಂದರೆ:–

(ಎ) ಹಾಗೆ ನಿರಸಿತವಾದ ನಿಯಮಗಳ ಹಿಂದಿನ ಕಾರ್ಯಾಚರಣೆಯನ್ನು ಅಥವಾ ಅದರ ಅಡಿಯಲ್ಲಿ ಯುಕ್ತವಾಗಿ ಮಾಡಲಾದ ಯಾವುದೇ ಕೃತ್ಯವನ್ನು ಅಥವಾ ಆ ಮೇರೆಗೆ ಮಾಡಲು ಎಡೆಗೊಟ್ಟ ಯಾವುದನ್ನೂ ; ಅಥವಾ

(ಬಿ) ಹಾಗೆ ನಿರಸಿತವಾದ ಯಾವುದೇ ನಿಯಮದ ಅಡಿಯಲ್ಲಿ ಆರ್ಜಿಸಿದ, ಪ್ರಾಪ್ತವಾದ ಅಥವಾ ಭರಿಸಲಾದ ಯಾವುದೇ ಹಕ್ಕು, ವಿಶೇಷಾಧಿಕಾರ, ಹೊಣೆಗಾರಿಕೆ ಅಥವಾ ದಾಯಿತ್ವವನ್ನು ; ಅಥವಾ

(ಸಿ) ಅಂಥ ನಿಯಮಗಳು ನಿರಸಿತಗೊಂಡಿಲ್ಲದಿದ್ದರೆ ಹೇಗೋ ಹಾಗೆ, ಯಾವುದೇ ಅಂಥ ಹಕ್ಕು, ವಿಶೇಷಾಧಿಕಾರ, ಹೊಣೆಗಾರಿಕೆ, ದಾಯಿತ್ವ, ದಂಡ, ಮುಟ್ಟುಗೋಲು ಅಥವಾ ಶಿಕ್ಷೆಯ ಸಂಬಂಧದಲ್ಲಿನ ತನಿಖೆ ಅಥವಾ ಕಾನೂನು ವ್ಯವಹರಣೆಗಳು ಅಥವಾ ಪರಿಹಾರವನ್ನು

– ಬಾಧಿಸತಕ್ಕದ್ದಲ್ಲ :

ಮತ್ತೂ ಪರಂತು, ಹಿಂದಿನ ಪರಂತುಕಕ್ಕೆ ಒಳಪಟ್ಟು, ಯಾವುವೇ ಅಂಥ ನಿಯಮಗಳ ಅಡಿಯಲ್ಲಿ ಮಾಡಲಾದ ಯಾವುದೇ ಕೃತ್ಯವನ್ನು ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಈ ನಿಯಮಗಳ ಸಂವಾದಿ ಉಪಬಂಧಗಳ ಅಡಿಯಲ್ಲಿ ಮಾಡಲಾಗಿದೆ ಅಥವಾ ಕೈಗೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಅದು , ಅಧಿನಿಯಮದ ಅಥವಾ ಸಂದರ್ಭಾನುಸಾರ ಈ ನಿಯಮಗಳ ಅಡಿಯಲ್ಲಿ ಮಾಡಲಾದ ಯಾವುದೇ ಕೃತ್ಯದ ಮೂಲಕ ಅಥವಾ ಕೈಗೊಂಡ ಯಾವುದೇ ಕ್ರಮದ ಮೂಲಕ ರದ್ದುಗೊಂಡ ಹೊರತು ಮತ್ತು ಅಲ್ಲಿಯವರೆಗೆ ತದನುಸಾರವಾಗಿ ಜಾರಿಯಲ್ಲಿರುವುದು ಮುಂದುವರಿಯತಕ್ಕದ್ದು.

## ಅನುಸೂಚಿ–I

### (22ನೇ ನಿಯಮ ನೋಡಿ)

### ಪೊಲೀಸ್ ಅಧಿಕಾರಿಗಳು ನೀಡಬೇಕಾದ ಸಂಕೇತಗಳು

**ಸಂಕೇತ ಸಂಖ್ಯೆ 1.–** ಹಿಂದಿನಿಂದ ಬರುತ್ತಿರುವ ಒಂದು ವಾಹನವನ್ನು ನಿಲ್ಲಿಸಲು, ಸಂಕೇತ ನೀಡುವವನು, ತನ್ನ ಎಡತೋಳನ್ನು ಅಡ್ಡವಾಗಿ ಭುಜದಿಂದ ನೆಲಕ್ಕೆ ಸಮಾನಾಂತರವಾಗಿ, ಅಂಗೈ ಮುಂಭಾಗಕ್ಕೆ ಮುಖ ಮಾಡಿ ಅದರ ಹಿಂಭಾಗವು ಹಿಂದಿನ ವಾಹನದ ಕಡೆಗೆ ಇರುವಂತೆ ಚಾಚತಕ್ಕದ್ದು.

**ಸಂಕೇತ ಸಂಖ್ಯೆ 2.–** ಮುಂಭಾಗದಿಂದ ಬರುತ್ತಿರುವ ಒಂದು ವಾಹನವನ್ನು ನಿಲ್ಲಿಸಲು, ಸಂಕೇತ ನೀಡುವವನು, ತನ್ನ ಬಲಗೈಯನ್ನು ತನ್ನ ತಲೆಯ ಮೇಲಕ್ಕೆ ಸ್ವಲ್ಪ ಮುಂಭಾಗಕ್ಕೆ ಚಾಚಿ, ಬೆರಳುಗಳನ್ನು ಮುಚ್ಚಿ ಮತ್ತು ಅಂಗೈಯು ಮುಂದಿನಿಂದ ಬರುವ ಸಂಚಾರಿ ವಾಹನಗಳ ಕಡೆಗೆ ಇರುವಂತೆ ಎತ್ತತಕ್ಕದ್ದು.

## ಅನುಸೂಚಿ–II

### (27 ನೇ ನಿಯಮ ನೋಡಿ)

### ವಾಹನಗಳನ್ನು ತಪಾಸಣೆ ಮಾಡುವುದಕ್ಕೆ ಅಧಿಕಾರ ಹೊಂದಿರುವ ಪ್ರಾಧಿಕಾರಿಗಳು

ಸಹಾಯಕ ಸಬ್ ಇನ್ಸ್ ಪೆಕ್ಟರ್ ದರ್ಜೆಗಿಂತ ಮೇಲಿನ ದರ್ಜೆಯ ಪೊಲೀಸ್ ಅಧಿಕಾರಿಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ವಿ.ಎನ್. ಸುಬ್ಬಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ.

**[1][ಅಧಿಸೂಚನೆ II ಸಂ. ಎಚ್‌ಡಿ 53 ಟಿಎಂಆರ್ 76, ಬೆಂಗಳೂರು, ದಿನಾಂಕ 2 ನೇ ಆಗಸ್ಟ್ 1979**

ಕರ್ನಾಟಕ ಸಂಚಾರ ನಿಯಂತ್ರಣ ನಿಯಮಗಳು, 1979ರ 1 ನೇ ನಿಯಮದ (2) ನೇ ಉಪ ನಿಯಮದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ 1979ರ ಆಗಸ್ಟ್ 15ನೇ ದಿನಾಂಕವನ್ನು ಸದರಿ ನಿಯಮಗಳು ಜಾರಿಗೆ ಬರುವ ದಿನಾಂಕವಾಗಿ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ವಿ.ಎನ್. ಸುಬ್ಬಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ.][1]

1. **9.8.1979ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ ಭಾಗ IV 2ಸಿ (i) ರಲ್ಲಿ ಪುಟ 337 ರಲ್ಲಿ ಪ್ರಕಟವಾಗಿದೆ.**

**[1][ಅಧಿಸೂಚನೆ ಸಂ. ಎಚ್‌ಡಿ 41 ಟಿಎಂಆರ್ 79, ಬೆಂಗಳೂರು, ದಿನಾಂಕ 9 ನೇ ಜನವರಿ 1981**

ಕರ್ನಾಟಕ ಸಂಚಾರ ನಿಯಂತ್ರಣ ಅಧಿನಿಯಮ, 1960ರ (1960ರ ಕರ್ನಾಟಕ ಅಧಿನಿಯಮ 18) 14 ಮತ್ತು 16 ನೇ ಪ್ರಕರಣಗಳಿಂದ ಅಗತ್ಯಪಡಿಸಲಾದಂತೆ, ಕರ್ನಾಟಕ ಸಂಚಾರ ನಿಯಂತ್ರಣ ನಿಯಮಗಳು, 1979ನ್ನು ಮತ್ತಷ್ಟು ತಿದ್ದುಪಡಿ ಮಾಡುವ ನಿಯಮಗಳ ಒಂದು ಕರಡನ್ನು ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ 27 ನೇ ಅಕ್ಟೋಬರ್ 1980ರಂದು ಅಥವಾ ಅದರೊಳಗಾಗಿ ಆಕ್ಷೇಪಣೆಗಳನ್ನು ಅಥವಾ ಸಲಹೆಗಳನ್ನು ಕೋರಿ, 18ನೇ ಸೆಪ್ಟೆಂಬರ್ 1980ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ ಭಾಗ –IV 2ಸಿ(i) ರಲ್ಲಿ ಅಧಿಸೂಚನೆ ಸಂಖ್ಯೆ. ಎಚ್‌ಡಿ 41 ಟಿಎಂಆರ್ 79 (ಜಿಎಸ್ ಆರ್ 272) ದಿನಾಂಕ 8 ನೇ ಸೆಪ್ಟೆಂಬರ್ 1980 – ಇದರಲ್ಲಿ ಪ್ರಕಟಿಸಲಾಗಿರುವುದರಿಂದ;

ಮತ್ತು ಸದರಿ ಕರಡನ್ನು 18ನೇ ಸೆಪ್ಟೆಂಬರ್ 1980ರಂದು ಸಾರ್ವಜನಿಕರಿಗೆ ದೊರೆಯುವಂತೆ ಮಾಡಲಾಗಿರುವುದರಿಂದ;

ಮತ್ತು ಸದರಿ ಕರಡಿಗೆ ಯಾವುವೇ ಆಕ್ಷೇಪಣೆಗಳು ಅಥವಾ ಸಲಹೆಗಳು ಬಂದಿಲ್ಲದಿರುವುದರಿಂದ;

1. **ದಿನಾಂಕ 15.1.1981ರ ಕರ್ನಾಟಕ ರಾಜ್ಯಪತ್ರದ ಭಾಗ IV 2ಸಿ (i) ರಲ್ಲಿ ಪುಟ 10–11 (ಜಿಎಸ್‌ಆರ್) ರಲ್ಲಿ ಪ್ರಕಟವಾಗಿದೆ.**

ಈಗ, ಕರ್ನಾಟಕ ಸಂಚಾರ ನಿಯಂತ್ರಣ ಅಧಿನಿಯಮ, 1960ರ (1960ರ ಕರ್ನಾಟಕ ಅಧಿನಿಯಮ 18) 14 ಮತ್ತು 16 ನೇ ಪ್ರಕರಣಗಳಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

1. **ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಂಚಾರ ನಿಯಂತ್ರಣ (ತಿದ್ದುಪಡಿ) ನಿಯಮಗಳು, 1981 ಎಂದು ಕರೆಯತಕ್ಕದ್ದು.

(2) ಅವು ಕೂಡಲೇ ಜಾರಿಗೆ ಬರತಕ್ಕದ್ದು.

2. **4 ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಂಚಾರ ನಿಯಮಗಳು 1979 ರ (ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ) 4 ನೇ ನಿಯಮದ (1) ನೇ ಉಪ ನಿಯಮದಲ್ಲಿ, " ಸಮೀಪದ ಸ್ಥಳಕ್ಕೆ ಅಂಥ ವಾಹನವನ್ನು ತೆಗೆದುಕೊಂಡು ಬರುವಂತೆ " ಎಂಬ ಪದಗಳಿಗೆ ಮೊದಲು " ಐದು ಕಿಲೋ ಮೀಟರುಗಳನ್ನು ಮೀರದ " ಎಂಬ ಪದಗಳನ್ನು ಸೇರಿಸತಕ್ಕದ್ದು.

3. **9 ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 9 ನೇ ನಿಯಮದಲ್ಲಿ, "ಒಂದು ಅಡಿಗಳಿಗಿಂತಲೂ", "ಇಪ್ಪತ್ತು ಅಡಿಗಳಿಗಿಂತ", "ಐದು ಅಡಿಗಳಿಗಿಂತ", "ಮೂರು ಅಡಿಗಳಿಗಿಂತ" ಮತ್ತು "ಎರಡು ಅಡಿ X ಎರಡು ಅಡಿಗಳಿಗಿಂತ" ಎಂಬ ಪದಗಳಿಗೆ ಕ್ರಮವಾಗಿ "0.305 ಮೀಟರುಗಿಂತಲೂ", "6.093 ಮೀಟರುಗಳಿಗಿಂತ", "1.523 ಮೀಟರುಗಳಿಗಿಂತ", "0.914 ಮೀಟರುಗಳಿಗಿಂತ" ಮತ್ತು "0.609 ಮೀಟರುಗಳಿಗಿಂತ" ಎಂಬ ಪದಗಳು ಮತ್ತು ಅಂಕಿಗಳನ್ನು ಪ್ರತಿಯೋಜಿಸತಕ್ಕದ್ದು.

4. **11 ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 11 ನೇ ನಿಯಮದಲ್ಲಿ, "ವಾಹನಗಳ ಚಕ್ರಗಳಿಗೆ ಡ್ರಾಗ್ ಷೂ ವನ್ನು ಕಟ್ಟತಕ್ಕದ್ದಲ್ಲ" ಎಂಬ ಪದಗಳಿಗೆ ಬದಲಾಗಿ "ಪ್ರಾಣಿಗಳ ಕಾಲುಗಳನ್ನು ವಾಹನಗಳ ಚಕ್ರಗಳಿಗೆ ಕಟ್ಟತಕ್ಕದ್ದಲ್ಲ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

5. **13 ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 13 ನೇ ನಿಯಮದಲ್ಲಿ "ಹನ್ನೆರಡು ವರ್ಷಗಳಿಗಿಂತ" ಎಂಬ ಪದಗಳಿಗೆ "ಹದಿನೆಂಟು ವರ್ಷಗಳಿಗಿಂತ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

6. **18 ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 18 ನೇ ನಿಯಮದಲ್ಲಿ "ಹದಿನೈದು ಇಂಚುಗಳಿಗಿಂತ ಮತ್ತು ಹನ್ನೆರಡು ಚದರ ಇಂಚುಗಳಿಗಿಂತ" ಮತ್ತು "ಇಪ್ಪತ್ತೈದು ಅಡಿ ಮತ್ತು ಮೂರು ಅಡಿ ಆರು ಇಂಚುಗಳಿಗಿಂತ" ಎಂಬ ಪದಗಳಿಗೆ ಕ್ರಮವಾಗಿ "0.381" ಮೀಟರುಗಳು ಮತ್ತು 0.774 ಚ.ಮೀಟರುಗಳಿಗಿಂತ" ಮತ್ತು "0.776 ಮೀಟರುಗಳು ಮತ್ತು 1.066 ಮೀಟರುಗಳಿಗಿಂತ" ಎಂಬ ಅಂಕಿಗಳು ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು.

7. **25ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 25 ನೇ ನಿಯಮದಲ್ಲಿ "ಆರು ಇಂಚುಗಳಿಗಿಂತ" ಎಂಬ ಪದಗಳಿಗೆ ಬದಲಾಗಿ "0.152 ಮೀಟರುಗಳಿಗಿಂತ" ಎಂಬ ಅಂಕಿಗಳನ್ನು ಪ್ರತಿಯೋಜಿಸತಕ್ಕದ್ದು.

**8. 28 ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 28 ನೇ ನಿಯಮದಲ್ಲಿ "ಆರು ಇಂಚು X ನಾಲ್ಕು ಇಂಚುಗಳು" ಎಂಬ ಪದಗಳಿಗೆ ಬದಲಾಗಿ "0.152 ಮೀಟರುಗಳಿಗೆ X 0.102 ಮೀಟರು" ಎಂಬ ಅಂಕಿಗಳು ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಎಚ್.ಬಿ. ರಾಮಸ್ವಾಮಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ.

## ಕರ್ನಾಟಕ ಸಂಚಾರ (ಸಾರ್ವಜನಿಕ ವಾಹನಗಳ ನಿಯಂತ್ರಣ) ನಿಯಮಗಳು, 1979

### ಅಧ್ಯಾಯ–I

**ನಿಯಮಗಳು**

1. ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ
2. ಪರಿಭಾಷೆಗಳು

### ಅಧ್ಯಾಯ–II

### ಸಾರ್ವಜನಿಕ ವಾಹನಗಳ ನಿಯಂತ್ರಣ

3. ಅನುಮತಿ ಪತ್ರಗಳ ನೀಡಿಕೆ, ನವೀಕರಣ, ಮಾರ್ಪಾಟು, ರದ್ದಿಯಾತಿ ಅಥವಾ ವರ್ಗಾವಣೆ
4. ಚಾಲನಾ ಲೈಸೆನ್ಸುಗಳ ನೀಡಿಕೆ, ನವೀಕರಣ ಅಥವಾ ರದ್ದಿಯಾತಿ
5. ಅನುಮತಿ ಪತ್ರಗಳ ಮತ್ತು ಚಾಲನಾ ಲೈಸೆನ್ಸುಗಳ ದ್ವಿಪ್ರತಿಗಳ ನೀಡಿಕೆ
6. ಅಪೀಲುಗಳನ್ನು ಹೂಡುವುದು
7. ದಸ್ತಾವೇಜುಗಳು, ಸ್ಥಳಗಳು ಮತ್ತು ಗುರುತುಗಳನ್ನು ತೋರಿಸುವುದು
8. ಚಾಲಕರು ಧರಿಸಬೇಕಾದ ಗುರುತು ಬಿಲ್ಲೆಗಳು ಮತ್ತು ಸಮವಸ್ತ್ರಗಳು
9. ಅನುಮತಿ ಪತ್ರಗಳಿಗೆ ಮತ್ತು ಚಾಲನಾ ಲೈಸೆನ್ಸುಗಳಿಗೆ ಫೀಜುಗಳು
10. ತಪಾಸಣೆಗಾಗಿ ಸಾರ್ವಜನಿಕ ವಾಹನಗಳ ಮತ್ತು ಪ್ರಾಣಿಗಳ ಅನುಮತಿ ಪತ್ರಗಳನ್ನು ಮತ್ತು ಚಾಲನಾ ಲೈಸೆನ್ಸುಗಳನ್ನು ಹಾಜರುಪಡಿಸುವುದು
11. ಚಾಲಕರ ಮತ್ತು ಪ್ರಯಾಣಿಕರ ನಡವಳಿಕೆ
12. ಅನುಮತಿ ಪತ್ರಗಳ ಮಂಜೂರಾತಿ
13. ಕನಿಷ್ಠ ಅಥವಾ ಗರಿಷ್ಠ ದರಗಳು ಅಥವಾ ಸಾಗಣೆ ಬಾಡಿಗೆಗಳು
14. ಸಾರ್ವಜನಿಕ ವಾಹನದಲ್ಲಿ ಒಯ್ಯಬಹುದಾದ ಪ್ರಯಾಣಿಕರ ಸಂಖ್ಯೆ ಮತ್ತು ಸರಕುಗಳ ಪ್ರಮಾಣ
15. ಸಾರ್ವಜನಿಕ ವಾಹನದಲ್ಲಿ ಗಂಟು ಮೂಟೆಗಳನ್ನು ಅಥವಾ ಸರಕುಗಳನ್ನು ಸಾಗಿಸಬಹುದಾದ ಷರತ್ತುಗಳು
16. ಒಯ್ಯಬೇಕಾದ ಸಾರ್ವಜನಿಕ ವಾಹನದ ನಿರ್ಮಿತಿ, ಜೋಡಣೆಗಳು ಮತ್ತು ಸಾಧನ ಸಾಮಗ್ರಿಗಳು
17. ಸಾರ್ವಜನಿಕ ವಾಹನದಲ್ಲಿ ಬಿಟ್ಟುಹೋದ ಸ್ವತ್ತಿನ ವಿಲೆ
18. ಸಾರ್ವಜನಿಕ ವಾಹನಗಳ ಬಳಕೆ
19. ನಿರಸನ ಮತ್ತು ಉಳಿಸುವಿಕೆಗಳು

| | |
|---|---|
| ನಮೂನೆ –1 | ನಮೂನೆ –5 |
| ನಮೂನೆ –2 | ನಮೂನೆ –6 |
| ನಮೂನೆ –3 | ಪರಿಶಿಷ್ಟ –ಎ |
| ನಮೂನೆ –4 | |

## ಕರ್ನಾಟಕ ಸಂಚಾರ (ಸಾರ್ವಜನಿಕ ವಾಹನಗಳ ನಿಯಂತ್ರಣ) ನಿಯಮಗಳು, 1979

### ಅಧಿಸೂಚನೆ–II

***ಸಂಖ್ಯೆ ಹೆಚ್ ಡಿ 53, ಟಿಎಂ ಆರ್ 76, ಬೆಂಗಳೂರು, ದಿನಾಂಕ 29 ನೇ ಜನವರಿ 1979.***

ಕರ್ನಾಟಕ ಸಂಚಾರ ನಿಯಂತ್ರಣ ಅಧಿನಿಯಮ, 1960ರ (1960ರ ಕರ್ನಾಟಕ ಅಧಿನಿಯಮ 18) 17 ನೇ ಪ್ರಕರಣದಿಂದ ಅಗತ್ಯಪಡಿಸಲಾದಂತೆ, ಕರ್ನಾಟಕ ಸಂಚಾರ (ಸಾರ್ವಜನಿಕ ವಾಹನಗಳ ನಿಯಂತ್ರಣ) ನಿಯಮಗಳು, 1979ರ ಒಂದು ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ 1978ರ ಸೆಪ್ಟೆಂಬರ್ 7 ರಂದು ಅಥವಾ ಅದಕ್ಕೂ ಮುಂಚೆ ಆಕ್ಷೇಪಣೆಗಳು ಅಥವಾ ಸಲಹೆಗಳನ್ನು ಕೋರಿ, ದಿನಾಂಕ 10 ನೇ ಆಗಸ್ಟ್ 1978ರ ಕರ್ನಾಟಕ ರಾಜ್ಯಪತ್ರದ ಭಾಗ–IV ಪ್ರಕರಣ2–ಸಿ (i) ರಲ್ಲಿ ಅಧಿಸೂಚನೆ–II ಸಂಖ್ಯೆ ಹೆಚ್ ಡಿ 53 ಟಿಎಂ ಆರ್ 76, ದಿನಾಂಕ 24 ನೇ ಜುಲೈ 1978ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 10 ನೇ ಆಗಸ್ಟ್ 1978ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಸದರಿ ಕರಡಿನ ಬಗ್ಗೆ ಯಾವುವೇ ಆಕ್ಷೇಪಣೆಗಳು ಅಥವಾ ಸಲಹೆಗಳು ಬಾರದಿರುವುದರಿಂದ;

ಈಗ, ಕರ್ನಾಟಕ ಸಂಚಾರ ನಿಯಂತ್ರಣ ಅಧಿನಿಯಮ, 1960ರ (1960ರ ಕರ್ನಾಟಕ ಅಧಿನಿಯಮ 18) 17ನೇ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ, ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

ಕರ್ನಾಟಕ ಸಂಚಾರ (ಸಾರ್ವಜನಿಕ ವಾಹನಗಳ ನಿಯಂತ್ರಣ) ನಿಯಮಗಳು, 1979.

## ಅಧ್ಯಾಯ–I

**1. ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಂಚಾರ (ಸಾರ್ವಜನಿಕ ವಾಹನಗಳ ನಿಯಂತ್ರಣ) ನಿಯಮಗಳು, 1979 ಎಂದು ಕರೆಯತಕ್ಕದ್ದು.

(2) ಇವು, ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗತಕ್ಕದ್ದು:

ಪರಂತು, ಯಾವುದೇ ಪ್ರದೇಶದಲ್ಲಿ ಕರ್ನಾಟಕ ಸಾರ್ವಜನಿಕ ವಾಹನಗಳ ಅಧಿನಿಯಮ, 1961 ಜಾರಿಯಲ್ಲಿದ್ದರೆ, ಕರ್ನಾಟಕ ಸಾರ್ವಜನಿಕ ವಾಹನಗಳ ಅಧಿನಿಯಮ, 1961ರ ಅಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳಿಗೆ ಸಂವಾದಿಯಾದ ಈ ನಿಯಮಗಳ ಉಪಬಂಧಗಳು ಅಂಥ ಪ್ರದೇಶಕ್ಕೆ ಅನ್ವಯವಾಗತಕ್ಕದ್ದಲ್ಲ.

(3) ಇವು, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ [1][ದಿನಾಂಕ][1] ದಂದು ಜಾರಿಯಲ್ಲಿ ಬರತಕ್ಕದ್ದು.

**1. ದಿನಾಂಕ 15.2.1979ರ ಕರ್ನಾಟಕ ರಾಜ್ಯಪತ್ರದ ಭಾಗ–IV 2–ಸಿ (i) ರಲ್ಲಿ 117ರಿಂದ 134ರವರೆಗಿನ ಪುಟಗಳಲ್ಲಿ ಪ್ರಕಟಿಸಲಾಗಿದೆ. ಅಧಿಸೂಚನೆ ಸಂಖ್ಯೆ III ಹೆಚ್ ಡಿ 53 ಟಿಎಂಆರ್ 76, ದಿನಾಂಕ 2ನೇ ಆಗಸ್ಟ್ 1979ರ ಪ್ರಕಾರ ಈ ನಿಯಮಗಳನ್ನು 15ನೇ ಆಗಸ್ಟ್ 1979 ರಿಂದ ಜಾರಿಗೆ ತರಲಾಗಿದೆ. ಸದರಿ ಪಾಠವು ಈ ನಿಯಮಗಳ ಕೊನೆಯ ಪುಟದಲ್ಲಿದೆ.**

**2. ಪರಿಭಾಷೆಗಳು.–** ಈ ನಿಯಮಗಳಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) **"ಅಧಿನಿಯಮ"** ಎಂದರೆ, ಕರ್ನಾಟಕ ಸಂಚಾರ ನಿಯಂತ್ರಣ ಅಧಿನಿಯಮ, 1960;

(ಬಿ) **"ನಿಯಂತ್ರಕ"** ಎಂದರೆ, ಯಾವುದೇ ನಿರ್ದಿಷ್ಟ ಪ್ರದೇಶಕ್ಕಾಗಿ ಸಾರ್ವಜನಿಕ ವಾಹನಗಳ ನಿಯಂತ್ರಕನೆಂದು ಸರ್ಕಾರದಿಂದ ನೇಮಕಗೊಂಡಿರುವಂಥ ಮತ್ತು ಅಂಥ ನಿರ್ದಿಷ್ಟಪ್ರದೇಶದಲ್ಲಿ ತನ್ನ ಕಚೇರಿಯನ್ನು ಹೊಂದಿರುವಂಥ ಒಬ್ಬ ಅಧಿಕಾರಿ:

ಪರಂತು, ಯಾವುದೇ ನಿರ್ದಿಷ್ಟಪಡಿಸಲಾದ ಪ್ರದೇಶದಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್‌ನ ದರ್ಜೆಗಿಂತ ಕಡಿಮೆ ದರ್ಜೆಯ ಒಬ್ಬ ಪೊಲೀಸ್ ಅಧಿಕಾರಿಯು ಕಾರ್ಯಸ್ಥಳದಲ್ಲಿದ್ದರೆ, ಈ ಖಂಡದ ಅಡಿಯಲ್ಲಿ ಆ ಪ್ರದೇಶಕ್ಕೆ ನೇಮಕಗೊಳ್ಳಬೇಕಾದ ಅಧಿಕಾರಿಯು ಪೊಲೀಸ್ ಇನ್ಸ್‌ಪೆಕ್ಟರನ ದರ್ಜೆಯ ಪೊಲೀಸ್ ಅಧಿಕಾರಿಯಾಗಿರತಕ್ಕದ್ದು;

(ಸಿ) "ನಮೂನೆ" ಎಂದರೆ, ಈ ನಿಯಮಗಳಿಗೆ ಲಗತ್ತಿಸಲಾದ ನಮೂನೆ;

(ಡಿ) "ಸರ್ಕಾರ" ಎಂದರೆ, ಕರ್ನಾಟಕ ಸರ್ಕಾರ.

## ಅಧ್ಯಾಯ–II

### ಸಾರ್ವಜನಿಕ ವಾಹನಗಳ ನಿಯಂತ್ರಣ

**3. ಅನುಮತಿ ಪತ್ರಗಳ ನೀಡಿಕೆ, ನವೀಕರಣ, ಮಾರ್ಪಾಟು, ರದ್ದಿಯಾತಿ ಅಥವಾ ವರ್ಗಾವಣೆ.–** (1) ನಮೂನೆ ಸಂಖ್ಯೆ 1 ರಲ್ಲಿ ಈ ಸಂಬಂಧದಲ್ಲಿ ಮಂಜೂರಾದ ಅನುಮತಿ ಪತ್ರದ ಮೇರೆಗೆ ಮತ್ತು ಅದಕ್ಕೆ ಅನುಸಾರವಾಗಿಯಲ್ಲದೆ, ಯಾವುದೇ ಸಾರ್ವಜನಿಕ ವಾಹನವನ್ನು ಬಾಡಿಗೆಗೆ ಬಿಡತಕ್ಕದ್ದಲ್ಲ ಅಥವಾ ನಡೆಸತಕ್ಕದ್ದಲ್ಲ ಅಥವಾ ಬಾಡಿಗೆಗೆ ಕೊಡತಕ್ಕದ್ದಲ್ಲ ಮತ್ತು ಯಾವುದೇ ಕುದುರೆ, ಗಿಡ್ಡುಕುದುರೆ, ಹೇಸರಗತ್ತೆ ಅಥವಾ ಎತ್ತನ್ನು ಅಂಥ ಸಾರ್ವಜನಿಕ ವಾಹನದೊಂದಿಗೆ ಬಳಸತಕ್ಕದ್ದಲ್ಲ.

(2) ನಿಯಂತ್ರಕನು, ಯಾವುದೇ ಅನುಮತಿ ಪತ್ರವನ್ನು ನೀಡಬಹುದು, ನವೀಕರಿಸಬಹುದು, ಮಾರ್ಪಾಟು ಮಾಡಬಹುದು, ರದ್ದುಗೊಳಿಸಬಹುದು ಅಥವಾ ವರ್ಗಾವಣೆ ಮಾಡಬಹುದು.

(3) (1) ನೇ ಉಪನಿಯಮದ ಅಡಿಯಲ್ಲಿ ಅನುಮತಿಸಲಾದ ಸಾರ್ವಜನಿಕ ವಾಹನದ ಮತ್ತು ಕುದುರೆ ಅಥವಾ ಇತರೆ ಪ್ರಾಣಿಯ ಸಂಬಂಧದ ಪ್ರತಿಯೊಂದು ಅನುಮತಿ ಪತ್ರವನ್ನು, ನಿಯಂತ್ರಕನು ವಾರ್ಷಿಕವಾಗಿ ನವೀಕರಿಸತಕ್ಕದ್ದು ಮತ್ತು ಯಾರೇ ವ್ಯಕ್ತಿಯು ಈ ನಿಯಮಗಳ ಅಡಿಯಲ್ಲಿ ಆ ಸಂಬಂಧದಲ್ಲಿ ಮಂಜೂರು ಮಾಡಲಾದ ಅನುಮತಿ ಪತ್ರದ ಮೇರೆಗಲ್ಲದೆ ಯಾವುದೇ ಸಾರ್ವಜನಿಕ ವಾಹನವನ್ನು ಇಟ್ಟುಕೊಳ್ಳತಕ್ಕದ್ದಲ್ಲ ಅಥವಾ ಬಾಡಿಗೆಗೆ ಓಡಿಸತಕ್ಕದ್ದಲ್ಲ.

(4) ಈ ಮುಂದಿನ ಷರತ್ತುಗಳನ್ನು ಪಾಲಿಸದಿದ್ದರೆ, ಸಾರ್ವಜನಿಕ ವಾಹನದ ಅನುಮತಿ ಪತ್ರವನ್ನು ರದ್ದುಗೊಳಿಸಬಹುದು, ಎಂದರೆ:–

(ಎ) ವಾಹನವು ಸುಸ್ಥಿತಿಯಲ್ಲಿರತಕ್ಕದ್ದು ಮತ್ತು ಅದರ ಎಲ್ಲ ಭಾಗಗಳನ್ನು ದುರಸ್ತಿ ಮಾಡಿಸಿದ್ದು ನೋಡುವುದಕ್ಕೆ ಲಕ್ಷಣವಾಗಿರತಕ್ಕದ್ದು.

(ಬಿ) ಕರ್ನಾಟಕ ಸಂಚಾರ ನಿಯಂತ್ರಣ ನಿಯಮಗಳು, 1978ರ ಅಡಿಯಲ್ಲಿ ನಿರ್ದಿಷ್ಟ ಪಡಿಸಲಾದಂತೆ ಸಾಕಷ್ಟು ಸಂಖ್ಯೆಯ ದೀಪಗಳನ್ನು, ಕೈಗಾಡಿಗೆ ಒಂದು ಮತ್ತು ಇತರೆ ಸಾರ್ವಜನಿಕ ವಾಹನಗಳ ಸಂದರ್ಭದಲ್ಲಿ ಎರಡು – ಹೀಗೆ ಸಾಕಷ್ಟು ಪ್ರಕಾಶಮಾನವಾದ ಬೆಳಕು ನೀಡಬಲ್ಲ ದೀಪಗಳನ್ನು ವ್ಯವಸ್ಥೆ ಮಾಡಿರತಕ್ಕದ್ದು ಮತ್ತು ಕೆಂಪು ಪ್ರತಿಫಲಕಗಳನ್ನು ಸಹ ಜೋಡಿಸಿರತಕ್ಕದ್ದು.

(ಸಿ) ಪ್ರತಿಯೊಂದು ಜಟಕಾ ಮತ್ತು ಕಮಾನು ಎತ್ತಿನಗಾಡಿಯು ಚಾಲಕನ ಕಣ್ಣಿನ ಮಟ್ಟಕ್ಕೆ ಅವನಿಗೆ ಪಕ್ಕದಲ್ಲಿ ಹಾದುಹೋಗುವ ವಾಹನವನ್ನು ನೋಡಲು ಅನುಕೂಲವಾಗುವ ಹಾಗೆ ಎರಡೂ ಪಕ್ಕಗಳಲ್ಲಿ ಆರು ಅಂಗುಲ ಚೌಕಾಕಾರಕ್ಕಿಂತ ಕಡಿಮೆಯದಲ್ಲದ ಅಳತೆಯ ಕಿಂಡಿಗಳನ್ನು ಹೊಂದಿರತಕ್ಕದ್ದು.

(ಡಿ) ಮೂರು ವರ್ಷದ ಒಳಗಿರುವ ಅಥವಾ 44 ಅಂಗುಲಕ್ಕಿಂತ ಕಡಿಮೆ ಎತ್ತರವಿರುವ ಕುದುರೆ ಅಥವಾ ಗಿಡ್ಡು ಕುದುರೆಯನ್ನು ಅಥವಾ ಎರಡು ವರ್ಷದ ಒಳಗಿರುವ ಎತ್ತನ್ನು ಉಪಯೋಗಿಸತಕ್ಕದ್ದಲ್ಲ.

(ಇ) ವಾಹನಕ್ಕೆ ಬಳಸಲಾಗುವ ಕುದುರೆ ಅಥವಾ ಗಿಡ್ಡು ಕುದುರೆ ಅಥವಾ ಎತ್ತು ಉತ್ತಮ ದೇಹ ಸ್ಥಿತಿಯದ್ದಾಗಿರತಕ್ಕದ್ದು ಮತ್ತು ಭಾರವನ್ನು ಎಳೆಯಲು ಅದಕ್ಕೆ ಹಾಕುವ ಸಜ್ಜು ಸಲಕರಣೆಗೆ ಸಂಪೂರ್ಣವಾಗಿ ಪಳಗಿರತಕ್ಕದ್ದು ಅಥವಾ ನೊಗಹೊರಲು ತರಪೇತಾಗಿರತಕ್ಕದ್ದು.

(ಎಫ್) ಸಜ್ಜು ಸಲಕರಣೆಯು ಪೂರ್ಣ ಪ್ರಮಾಣದಲ್ಲಿರತಕ್ಕದ್ದು ಮತ್ತು ಅದು ಉಪಯೋಗಿಸಲು ಬರುವಂತಿರತಕ್ಕದ್ದು.

(ಜಿ) ವಾಹನವನ್ನು ನಿಲ್ಲಿಸುವ ಅಥವಾ ಪ್ರಾಣಿಯ ವಸತಿಯ ಆವರಣವು ನೈರ್ಮಲ್ಯದ ದೃಷ್ಟಿಯಿಂದ ಸೂಕ್ತವಾದುದಾಗಿರತಕ್ಕದ್ದು ಮತ್ತು ಆಕ್ಷೇಪಣಾ ರಹಿತವಾಗಿರತಕ್ಕದ್ದು.

(5) ಸಾರ್ವಜನಿಕ ವಾಹನದ ಮಾಲೀಕನು, ವಾಹನವನ್ನು ವರ್ಗಾವಣೆ ಮಾಡುವ ಬಗ್ಗೆ ನಿಯಂತ್ರಕನಿಂದ ಅನುಮತಿ ಪತ್ರದ ಮೇಲೆ ಹಿಂಬರಹವನ್ನು ಪಡೆದು ಇತರ ಯಾರೇ ವ್ಯಕ್ತಿಗೆ ಅದನ್ನು ವರ್ಗಾವಣೆ ಮಾಡಬಹುದು.

(6) ನಿಯಂತ್ರಕನು, ನಮೂನೆ ಸಂಖ್ಯೆ 2 ರಲ್ಲಿ ಸಾರ್ವಜನಿಕ ವಾಹನಗಳ ರಿಜಿಸ್ಟರನ್ನು ಇಡತಕ್ಕದ್ದು.

(7) ಸಾರ್ವಜನಿಕ ವಾಹನಗಳ ಚಾಲಕನು, ಲೈಸೆನ್ಸ್ ಪಡೆಯಲು ಅಥವಾ ನವೀಕರಿಸಲು ಸಲ್ಲಿಸಬೇಕಾದ ಅರ್ಜಿಯು ನಮೂನೆ ಸಂಖ್ಯೆ 3 ರಲ್ಲಿ ಮತ್ತು ಸಾರ್ವಜನಿಕ ವಾಹನಗಳ ಚಾಲನಾ ಲೈಸೆನ್ಸಿನ ಮಂಜೂರಾತಿಗಾಗಿ ಸಲ್ಲಿಸಬೇಕಾದ ಅರ್ಜಿಯು ನಮೂನೆ ಸಂಖ್ಯೆ 4 ರಲ್ಲಿ ಇರತಕ್ಕದ್ದು.

(8) ನಿಯಂತ್ರಕನು, ನಮೂನೆ ಸಂಖ್ಯೆ 5 ರಲ್ಲಿ ಸಾರ್ವಜನಿಕ ವಾಹನಗಳ ಚಾಲಕರ ರಿಜಿಸ್ಟರನ್ನು ಇಡತಕ್ಕದ್ದು.

4. **ಚಾಲನಾ ಲೈಸೆನ್ಸುಗಳ ನೀಡಿಕೆ, ನವೀಕರಣ ಅಥವಾ ರದ್ದಿಯಾತಿ.–** (1) ಈ ನಿಯಮಗಳ ಮೇರೆಗೆ ಸಾರ್ವಜನಿಕ ವಾಹನದ ಲೈಸೆನ್ಸ್ ಪಡೆದಿರುವ ಯಾರೇ ಮಾಲೀಕನು, ಆ ವರ್ಗದ ಸಾರ್ವಜನಿಕ ವಾಹನವನ್ನು ಚಾಲನೆ ಮಾಡಲು ಲೈಸೆನ್ಸ್ ಹೊಂದಿಲ್ಲದ ಇತರ ಯಾರೇ ವ್ಯಕ್ತಿಗೆ ಅದನ್ನು ಚಾಲನೆ ಮಾಡಲು ಅನುಮತಿಸತಕ್ಕದ್ದಲ್ಲ.

(2) ಯಾರೇ ವ್ಯಕ್ತಿಯು ಆ ವರ್ಗದ ಸಾರ್ವಜನಿಕ ವಾಹನವನ್ನು ಚಾಲನೆ ಮಾಡಲು ನಿಯಂತ್ರಕನಿಂದ ಪಡೆದ ಲೈಸೆನ್ಸನ್ನು ಹೊಂದಿದ್ದ ಹೊರತು ಈ ನಿಯಮಗಳ ಮೇರೆಗಿನ ಲೈಸೆನ್ಸ್ ಇರುವ ಯಾವುದೇ ಸಾರ್ವಜನಿಕ ವಾಹನದ ಚಾಲಕನಾಗಿ ಕಾರ್ಯ ನಿರ್ವಹಿಸತಕ್ಕದ್ದಲ್ಲ.

(3) ಸಾರ್ವಜನಿಕ ವಾಹನವನ್ನು ಚಾಲನೆ ಮಾಡುವ ಒಂದು ಲೈಸೆನ್ಸನ್ನು,–

(ಎ) ಹದಿನೆಂಟು ವರ್ಷ ವಯಸ್ಸು ತುಂಬಿರದ;

(ಬಿ) ಯಾವುದೇ ಸೋಂಕು ರೋಗದಿಂದ, ಅಂಟು ರೋಗದಿಂದ ಅಥವಾ ಅಸಹ್ಯಕರವಾದ ರೋಗದಿಂದ ಅಥವಾ ಚಾಲಕನ ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸಲು ಅಡ್ಡಿಯಾಗುವ ಸಂಭವವಿದೆಯೆಂದು ನಿಯಂತ್ರಕನು ಅಭಿಪ್ರಾಯಪಡಬಹುದಾದ ಇತರ ಯಾವುದೇ ರೋಗದಿಂದ ಬಳಲುತ್ತಿರುವ;

(ಸಿ) ನೈತಿಕ ಅಧಃಪತನವನ್ನು ಒಳಗೊಂಡಿರುವ ಯಾವುದೇ ಅಪರಾಧಕ್ಕೆ ಸಂಬಂಧಿಸಿದಂತೆ ಕ್ರಿಮಿನಲ್ ನ್ಯಾಯಾಲಯದಿಂದ ಅಪರಾಧಿಯೆಂದು ನಿರ್ಣೀತನಾದ; ಅಥವಾ

(ಡಿ) ಒಮ್ಮೆಗೆ ಹನ್ನೆರಡು ತಿಂಗಳಿಗಿಂತ ಹೆಚ್ಚಿನ ಅವಧಿಗಾಗಿ

– ಒಬ್ಬ ವ್ಯಕ್ತಿಗೆ ಮಂಜೂರು ಮಾಡತಕ್ಕದ್ದಲ್ಲ.

5. **ಅನುಮತಿ ಪತ್ರಗಳ ಮತ್ತು ಚಾಲನಾ ಲೈಸೆನ್ಸುಗಳ ದ್ವಿಪ್ರತಿಗಳ ನೀಡಿಕೆ.–** ನಿಯಂತ್ರಕನು ಹರಿದು ಹೋದ, ವಿರೂಪಗೊಂಡ, ಕಳೆದುಹೋದ ಅಥವಾ ನಾಶವಾದ ಅನುಮತಿ ಪತ್ರಗಳು ಮತ್ತು ಚಾಲನಾ ಲೈಸೆನ್ಸುಗಳ ದ್ವಿಪ್ರತಿಗಳನ್ನು ನೀಡಲು ಸಕ್ಷಮನಾಗಿರತಕ್ಕದ್ದು ಮತ್ತು ನಮೂನೆ ಸಂಖ್ಯೆ 6 ರಲ್ಲಿ ಒಂದು ರಿಜಿಸ್ಟರನ್ನು ಇಡತಕ್ಕದ್ದು.

6. **ಅಪೀಲುಗಳನ್ನು ಹೂಡುವುದು.–** (1) ಒಂದು ಅನುಮತಿ ಪತ್ರವನ್ನು ಅಥವಾ ಚಾಲನಾ ಲೈಸೆನ್ಸನ್ನು ನೀಡಲು ಅಥವಾ ನವೀಕರಿಸಲು ನಿರಾಕರಿಸಿದ್ದರಿಂದ ಅಥವಾ ಅಂಥ ಯಾವುದೇ ಅನುಮತಿ ಪತ್ರ ಅಥವಾ ಚಾಲನಾ ಲೈಸೆನ್ಸನ್ನು ರದ್ದುಗೊಳಿಸಿದ್ದರಿಂದ ಅಥವಾ ಮಾರ್ಪಾಟು ಮಾಡಿದ್ದರಿಂದ ಬಾಧಿತನಾದ ಯಾರೇ ವ್ಯಕ್ತಿಯು, ಸಂದರ್ಭಾನುಸಾರ, ಅಂಥ ನಿರಾಕರಣೆಯ, ರದ್ದಿಯಾತಿಯ ಅಥವಾ ಮಾರ್ಪಾಟಿನ ದಿನಾಂಕದಿಂದ ಒಂದು ತಿಂಗಳ ಒಳಗಾಗಿ, ಬೆಂಗಳೂರು ನಗರದಲ್ಲಿ ಪೊಲೀಸ್ ಡೆಪ್ಯೂಟಿ ಕಮೀಷನರ್ ರವರಿಗೆ (ಸಂಚಾರ) ಮತ್ತು ಇತರೆಡೆಗಳಲ್ಲಿ ಜಿಲ್ಲೆಯ ಪೊಲೀಸ್ ಸೂಪರಿಂಟೆಂಡೆಂಟರಿಗೆ ಅಪೀಲನ್ನು ಸಲ್ಲಿಸಬಹುದು.

(2) ಅಪೀಲು ಪ್ರಾಧಿಕಾರಿಯು, ನಿಯಂತ್ರಕನ ಆದೇಶವನ್ನು ಸ್ಥಿರೀಕರಿಸಬಹುದು, ಮಾರ್ಪಾಟು ಮಾಡಬಹುದು, ರದ್ದುಗೊಳಿಸಬಹುದು ಮತ್ತು ಅವರು ಮಾಡಿದ ಅಂಥ ಆದೇಶವು ಅಂತಿಮವಾಗಿರತಕ್ಕದ್ದು :

ಪರಂತು, ಅಪೀಲುದಾರನಿಗೆ ಅಹವಾಲು ಹೇಳಿಕೊಳ್ಳಲು ಅವಕಾಶ ನೀಡದ ಹೊರತು ಅಂಥ ಯಾವುದೇ ಆದೇಶವನ್ನು ಹೊರಡಿಸತಕ್ಕದ್ದಲ್ಲ.

7. **ದಸ್ತಾವೇಜುಗಳು, ಸ್ಥಳಗಳು ಮತ್ತು ಗುರುತುಗಳನ್ನು ತೋರಿಸುವುದು.–** (1) ಪ್ರತಿಯೊಂದು ಸಾರ್ವಜನಿಕ ವಾಹನದ ಚಾಲಕನು 4 ನೇ ನಿಯಮದ ಅಡಿಯಲ್ಲಿ ಅವನಿಗೆ ನೀಡಲಾಗಿರುವ ಲೈಸೆನ್ಸನ್ನು ಅವನು ತನ್ನೊಂದಿಗೆ ಒಯ್ಯತಕ್ಕದ್ದು.

(2) ಯಾವುದೇ ಸಾರ್ವಜನಿಕ ವಾಹನದ ನೋಂದಣಿಯಾದ ಮೇಲೆ, ನಿಯಂತ್ರಕನು, ಸಾರ್ವಜನಿಕ ವಾಹನಗಳ ಎದ್ದು ಕಾಣುವ ಸ್ಥಳದ ಮೇಲೆ ಸಾರ್ವಜನಿಕ ವಾಹನದ ನೋಂದಣಿ ಸಂಖ್ಯೆಯನ್ನು ಮತ್ತು ಅದರಲ್ಲಿ ಒಯ್ಯಲು ಅನುಮತಿಸಿರುವ ಪ್ರಯಾಣಿಕರ ಸಂಖ್ಯೆಯನ್ನು ಬರೆಯಿಸತಕ್ಕದ್ದು.

(3) ನಿಯಂತ್ರಕನು, 13 ನೇ ನಿಯಮದ ಅಡಿಯಲ್ಲಿ ಪ್ರಕಟಿಸಲಾದ ದರದ ಪಟ್ಟಿಯನ್ನು ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ಸಿದ್ಧಪಡಿಸುವಂತೆ ಮಾಡತಕ್ಕದ್ದು ಮತ್ತು ಸಾರ್ವಜನಿಕ ವಾಹನಗಳು ಸಾಮಾನ್ಯವಾಗಿ ಓಡಾಡುವ ಪ್ರಧಾನ ಸ್ಥಳಗಳಿಂದ ಇತರ ಸ್ಥಳಗಳಿಗೆ ಮತ್ತು ಇತರ ಸ್ಥಳಗಳಿಂದ ಪ್ರಧಾನ ಸ್ಥಳಗಳಿಗೆ ನಡುವೆ ಇರುವ ದೂರವನ್ನು ತೋರಿಸುವ ಒಂದು ಕೋಷ್ಟಕವನ್ನು ಅಂಥ ಪಟ್ಟಿಗೆ ಲಗತ್ತಿಸತಕ್ಕದ್ದು ಮತ್ತು ಹಾಗೆ ತೋರಿಸಲಾದ ದೂರವು ಸರಿಯಾದುದೆಂದು ಭಾವಿಸತಕ್ಕದ್ದು.

(4) ಬಾಡಿಗೆಗಾಗಿ ನಿಂತಿರುವ ಅಥವಾ ಓಡಾಡುವ ಪ್ರತಿಯೊಂದು ಸಾರ್ವಜನಿಕ ವಾಹನದ ಚಾಲಕನು, ಅಂಥ ಪಟ್ಟಿ ಮತ್ತು ಕೋಷ್ಟಕದ ಒಂದು ಪ್ರತಿಯನ್ನು ತನ್ನ ಬಳಿ ಇಟ್ಟುಕೊಂಡಿರತಕ್ಕದ್ದು ಮತ್ತು ಅವನ ವಾಹನದ ಯಾರೇ ಬಾಡಿಗೆದಾರನ ಅಥವಾ ಪ್ರಯಾಣಿಕನ ಮಾಹಿತಿಯ ಸಲುವಾಗಿ ಯಾರೇ ಪೊಲೀಸ್ ಅಧಿಕಾರಿಯು ಕೇಳಿದರೆ ತಪಾಸಣೆಗಾಗಿ ಅದನ್ನು ಹಾಜರುಪಡಿಸತಕ್ಕದ್ದು.

**8. ಚಾಲಕರು ಧರಿಸಬೇಕಾದ ಗುರುತು ಬಿಲ್ಲೆಗಳು ಮತ್ತು ಸಮವಸ್ತ್ರಗಳು.–** (1) ಸಾರ್ವಜನಿಕ ವಾಹನದ ಪ್ರತಿಯೊಬ್ಬ ಚಾಲಕನು, ಲೈಸೆನ್ಸ್ ಮಂಜೂರಾಗಿರುವಂಥ ವಾಹನದ ವರ್ಗ ಮತ್ತು ಸಂಖ್ಯೆಯನ್ನು ಒಳಗೊಂಡಿರುವ, ಪರಿಶಿಷ್ಟ 'ಎ' ಯಲ್ಲಿ ನಿರ್ದಿಷ್ಟಪಡಿಸಿರುವಂಥ ಒಂದು ಲೋಹದ ಗುರುತು ಬಿಲ್ಲೆಯನ್ನು ಧರಿಸಿರತಕ್ಕದ್ದು.

(2) 9 ನೇ ನಿಯಮದಲ್ಲಿ ನಿರ್ದಿಷ್ಟಪಡಿಸಿರುವ ವರ್ಗ I ಮತ್ತು ವರ್ಗ II ರ ಸಾರ್ವಜನಿಕ ವಾಹನದ ಪ್ರತಿಯೊಬ್ಬ ಚಾಲಕನು, ಚಾಲಕನಾಗಿ ಕಾರ್ಯ ನಿರ್ವಹಿಸುವಾಗ ಅಚ್ಚುಕಟ್ಟಾಗಿರುವ ಮತ್ತು ಸ್ವಚ್ಛವಾಗಿರುವ ಬಟ್ಟೆಗಳನ್ನು ಧರಿಸತಕ್ಕದ್ದು. ಅವನು, ಅಚ್ಚುಕಟ್ಟಾಗಿ ಮಡಿಚಿರುವ ಒಂದು ರುಮಾಲನ್ನು ಅಥವಾ ಅಂಚು ಇರುವ ಒಂದು ಟೋಪಿಯನ್ನು ಧರಿಸತಕ್ಕದ್ದು. ಟೊಂಕದಿಂದ ಕೆಳಭಾಗದವರೆಗೂ ವಿಸ್ತರಿಸಿರುವ ಒಂದು ಉದ್ದ ಕೋಟು ಮತ್ತು ಪಾದಗಳವರೆಗಿನ ಷರಾಯಿಯನ್ನು ಧರಿಸತಕ್ಕದ್ದು. ಅವನು ಕೋಟಿನ ಮೇಲೆ ನಾಲ್ಕು ಅಂಗುಲಕ್ಕಿಂತ ಕಡಿಮೆ ಇಲ್ಲದಷ್ಟು ಅಗಲದ ಚರ್ಮದ ಸೊಂಟ ಪಟ್ಟಿಯ ಬಲ ಬದಿಗೆ ಲೋಹದ ಗುರುತು ಬಿಲ್ಲೆಯನ್ನು ಸಿಕ್ಕಿಸಿರಸತಕ್ಕದ್ದು.

(3) ಪ್ರತಿಯೊಬ್ಬ ಜಟಕಾ ಚಾಲಕನೂ ಅಚ್ಚುಕಟ್ಟಾದ ಮತ್ತು ಸ್ವಚ್ಛವಾದ ಬಟ್ಟೆಗಳನ್ನು ಧರಿಸಿರತಕ್ಕದ್ದು ಮತ್ತು ಸ್ವಚ್ಛವಾದ ಟೊಪ್ಪಿಯನ್ನು ಧರಿಸಿರತಕ್ಕದ್ದು.

**9. ಅನುಮತಿ ಪತ್ರಗಳಿಗೆ ಮತ್ತು ಚಾಲನಾ ಲೈಸೆನ್ಸುಗಳಿಗೆ ಫೀಜುಗಳು.–** ಸಾರ್ವಜನಿಕ ವಾಹನಗಳನ್ನು ಇಟ್ಟುಕೊಳ್ಳಲು, ಬಾಡಿಗೆಗೆ ಕೊಡಲು ಅಥವಾ ಓಡಿಸಲು ಒಂದು ಅಧಿಕೃತ ವರ್ಷಕ್ಕೆ ಅಥವಾ ಅದರ ಭಾಗಕ್ಕೆ ಸಾರ್ವಜನಿಕ ವಾಹನಗಳ ಅನುಮತಿ ಪತ್ರ ಪಡೆಯಲು ಇರುವ ಫೀಜು ಈ ಮುಂದೆ ನಿರ್ದಿಷ್ಟಪಡಿಸಲಾದಂತೆ ಇರತಕ್ಕದ್ದು:–

| ವರ್ಗ | ವಿವರಣೆ | ಅನುಮತಿ ಪತ್ರ ಪಡೆಯಲು ಫೀಜುಗಳು |
|---|---|---|
| | | ರೂ. |
| I. | ಚಾಲಕನೂ ಸೇರಿದಂತೆ ಆರು ವ್ಯಕ್ತಿಗಳಿಗೆ ಕುಳಿತುಕೊಳ್ಳಲು ಅವಕಾಶವಿರುವ ಎರಡು ಕುದುರೆಗಳು ಎಳೆಯುವ ನಾಲ್ಕು ಚಕ್ರದ ವಾಹನ | 15 |
| II. | ಚಾಲಕನೂ ಸೇರಿದಂತೆ ಆರಕ್ಕಿಂತ ಕಡಿಮೆ ವ್ಯಕ್ತಿಗಳಿಗೆ ಕುಳಿತುಕೊಳ್ಳಲು ಅವಕಾಶವಿರುವ ಕುದುರೆಗಳು ಎಳೆಯುವ ನಾಲ್ಕು ಚಕ್ರದ ವಾಹನ | 12 |
| III. | ಕುದುರೆಯು ಎಳೆಯುವ ಇತರ ನಾಲ್ಕು ಚಕ್ರದ ವಾಹನ | 8 |
| IV. | ಒಂದು ಕುದುರೆ ಅಥವಾ ಎರಡು ಎತ್ತುಗಳು ಎಳೆಯುವ ಎರಡು ಚಕ್ರದ ವಾಹನ | 4 |
| V. | ಒಂದು ಎತ್ತು ಎಳೆಯುವ ಎರಡು ಚಕ್ರದ ವಾಹನ | 2 |
| VI. | ಮನುಷ್ಯನು ಎಳೆಯುವ ಎರಡು ಚಕ್ರದ ವಾಹನ | 1.50 |
| VII. | ಇತರ ಯಾವುದೇ ವಾಹನ | 2 |

(2) ಚಾಲನಾ ಲೈಸೆನ್ಸ್ ಮತ್ತು ಗುರುತು ಬಿಲ್ಲೆಯನ್ನು ನೀಡುವುದಕ್ಕೆ ವಿಧಿಸುವ ಫೀಜು ಎರಡು ರೂಪಾಯಿಗಳಾಗಿರತಕ್ಕದ್ದು.

(3) ಅನುಮತಿ ಪತ್ರ, ಚಾಲನಾ ಲೈಸೆನ್ಸ್ ಅಥವಾ ಗುರುತು ಬಿಲ್ಲೆಯ ದ್ವಿಪ್ರತಿಯನ್ನು ನೀಡುವುದಕ್ಕಾಗಿ ಇರುವ ಶುಲ್ಕವು ಅನುಕ್ರಮವಾಗಿ 0.50 ಪೈಸೆ, 0.25 ಪೈಸೆ ಮತ್ತು 0.25 ಪೈಸೆಗಳಾಗಿರತಕ್ಕದ್ದು.

**10. ತಪಾಸಣೆಗಾಗಿ ಸಾರ್ವಜನಿಕ ವಾಹನಗಳ ಮತ್ತು ಪ್ರಾಣಿಗಳ ಅನುಮತಿ ಪತ್ರಗಳನ್ನು ಮತ್ತು ಚಾಲನಾ ಲೈಸೆನ್ಸುಗಳನ್ನು ಹಾಜರುಪಡಿಸುವುದು.–** (1) ಸಂಚಾರವನ್ನು ನಿಯಂತ್ರಿಸುತ್ತಿರುವ ಯಾರೇ ಪೊಲೀಸ್ ಅಧಿಕಾರಿ ಅಥವಾ ಸಮವಸ್ತ್ರದಲ್ಲಿರುವ ಇತರ ಯಾರೇ ಪೊಲೀಸ್ ಆಧಿಕಾರಿಯು ತಪಾಸಣೆ ಮಾಡುವ ಸಲುವಾಗಿ ಯಾವುದೇ ಸಾರ್ವಜನಿಕ ವಾಹನದ ಮಾಲೀಕನನ್ನು ಅಥವಾ ಚಾಲಕನನ್ನು ಅನುಮತಿ ಪತ್ರವನ್ನು ಅಥವಾ ಲೈಸೆನ್ಸನ್ನು ಹಾಜರುಪಡಿಸುವಂತೆ ಕೇಳಿದಾಗ ಅವನು ತನ್ನ ಅನುಮತಿ ಪತ್ರ ಅಥವಾ ಲೈಸೆನ್ಸನ್ನು ಹಾಜರುಪಡಿಸತಕ್ಕದ್ದು.

(2) ನಿಯಂತ್ರಕನು ಅಥವಾ ತಪಾಸಣೆ ಮಾಡುವ ಸಂಬಂಧದಲ್ಲಿ ಅವನಿಂದ ನೇಮಕನಾಗಿರುವ ಅಧಿಕಾರಿಯು ಲೈಸೆನ್ಸ್ ಹೊಂದಿರುವ ಸಾರ್ವಜನಿಕ ವಾಹನದ ಮಾಲೀಕ ಅಥವಾ ಚಾಲಕನನ್ನು, ಅಂಥ ವಾಹನವನ್ನು ಮತ್ತು ಆ ಪ್ರಾಣಿಗಳನ್ನು ಅಥವಾ ಪ್ರಾಣಿಗಳು ಮತ್ತು ಉಪಯೋಗಿಸುತ್ತಿರುವ ಆ ಸಜ್ಜು ಸಲಕರಣೆಗಳನ್ನು ತಪಾಸಣೆ ಮಾಡುವ ಸಲುವಾಗಿ ಹಾಜರುಪಡಿಸುವಂತೆ ಅಗತ್ಯಪಡಿಸಿದಾಗ ಅವುಗಳನ್ನು ಸಹ ಹಾಜರುಪಡಿಸತಕ್ಕದ್ದು.

(3) ನಿಯಂತ್ರಕನು ಅಥವಾ ತಪಾಸಣೆ ಮಾಡುವ ಸಂಬಂಧದಲ್ಲಿ ಅವನಿಂದ ನೇಮಕವಾಗಿರುವ ಅಧಿಕಾರಿಯು ಲೈಸನ್ಸು ಹೊಂದಿರುವ ಸಾರ್ವಜನಿಕ ವಾಹನದ ಮಾಲೀಕ ಅಥವಾ ಚಾಲಕನನ್ನು, ಅಂಥ ಪ್ರಾಣಿ ಅಥವಾ ಪ್ರಾಣಿಗಳನ್ನು ತಪಾಸಣೆಗಾಗಿ ಪಶುವೈದ್ಯಕೀಯ ಪರಿಶೀಲಕನ ಮುಂದೆ ಹಾಜರುಪಡಿಸುವಂತೆ ಅಗತ್ಯಪಡಿಸಿದಾಗ ಹಾಗೆ ಹಾಜರುಪಡಿಸಲು ಸಹ ಬದ್ಧನಾಗಿರತಕ್ಕದ್ದು.

11. **ಚಾಲಕರ ಮತ್ತು ಪ್ರಯಾಣಿಕರ ನಡವಳಿಕೆ.–** (1) ಸಾರ್ವಜನಿಕ ವಾಹನದ ಪ್ರತಿಯೊಬ್ಬ ಚಾಲಕನು ಕರ್ತವ್ಯದ ಮೇಲಿರುವಾಗ,–

(ಎ) ಈ ನಿಯಮಗಳನ್ನು ಸರಿಯಾಗಿ ಪಾಲಿಸುವುದಕ್ಕೆ ಜವಾಬ್ದಾರರಾಗಿರತಕ್ಕದ್ದು.

(ಬಿ) ನಾಗರಿಕ ಮತ್ತು ಶಿಸ್ತುಬದ್ಧ ರೀತಿಯಲ್ಲಿ ವರ್ತಿಸತಕ್ಕದ್ದು.

(ಸಿ) ನಿಯಮಿಸಿದ ರೀತಿಯ ಉಡುಗೆಯನ್ನು ತೊಟ್ಟಿರತಕ್ಕದ್ದು.

(ಡಿ) ವಾಹನವನ್ನು ಸ್ವಚ್ಛ ಮತ್ತು ನೈರ್ಮಲ್ಯಕರ ರೀತಿಯಲ್ಲಿ ಇಡತಕ್ಕದ್ದು.

(ಇ) ಹೆಚ್ಚಿನ ಪ್ರಯಾಣಿಕರನ್ನು, ಗಂಟುಮೂಟೆಯನ್ನು ಅಥವಾ ಸರಕನ್ನು ಒಯ್ಯತಕ್ಕದ್ದಲ್ಲ.

(ಎಫ್) ಕಾನೂನು ಸಮ್ಮತ ದರವನ್ನು ನೀಡುವ ಪ್ರಯಾಣಿಕರನ್ನು ಕರೆದೊಯ್ಯಲು ನಿರಾಕರಿಸತಕ್ಕದ್ದಲ್ಲ.

(ಜಿ) ಧೂಮಪಾನ ಮಾಡತಕ್ಕದ್ದಲ್ಲ.

(ಹೆಚ್) ಮದ್ಯಪಾನದ ಪ್ರಭಾರದಲ್ಲಿ ಇರತಕ್ಕದ್ದಲ್ಲ.

(ಐ) ಪ್ರಯಾಣಿಕರನ್ನು ಆಕರ್ಷಿಸುವ ಅಥವಾ ಪ್ರಚಾರದ ದೃಷ್ಟಿಯಿಂದ ಸನ್ನೆ ಮಾಡತಕ್ಕದ್ದಲ್ಲ, ಕಿರಿಚತಕ್ಕದ್ದಲ್ಲ ಅಥವಾ ಅಂಥ ಯಾವುವೇ ಸಂಕೇತವನ್ನು ಅಥವಾ ಸದ್ದನ್ನು ಮಾಡತಕ್ಕದ್ದಲ್ಲ.

(2) ಯಾರೇ ಪ್ರಯಾಣಿಕನು,–

(i) ಅಶಿಸ್ತಿನ ಅಥವಾ ಅಸಭ್ಯ ರೀತಿಯಲ್ಲಿ ನಡೆದುಕೊಳ್ಳತಕ್ಕದ್ದಲ್ಲ; ಅಥವಾ

(ii) ಮಹಿಳಾ ಪ್ರಯಾಣಿಕರು ಮುಜುಗರಗೊಳ್ಳುವ ರೀತಿಯಲ್ಲಿ ನಡೆದುಕೊಳ್ಳತಕ್ಕದ್ದಲ್ಲ; ಅಥವಾ

(iii) ಬೈಗುಳದ ಭಾಷೆಯನ್ನು ಉಪಯೋಗಿಸತಕ್ಕದ್ದಲ್ಲ; ಅಥವಾ

(iv) ಧೂಮಪಾನ ಮಾಡತಕ್ಕದ್ದಲ್ಲ ಅಥವಾ ಉಗುಳತಕ್ಕದ್ದಲ್ಲ; ಅಥವಾ

(v) ಯಾವುವೇ ಜೋಡಣೆಗಳಿಗೆ ಹಾನಿ, ಕೆಡುಕು ಮಾಡತಕ್ಕದ್ದಲ್ಲ ಅಥವಾ ಅವುಗಳನ್ನು ಕಿತ್ತು ಹಾಕತಕ್ಕದ್ದಲ್ಲ.

12. **ಅನುಮತಿ ಪತ್ರಗಳ ಮಂಜೂರಾತಿ.–** ಆ ಪ್ರದೇಶದ ಮೇಲೆ ಅಧಿಕಾರವ್ಯಾಪ್ತಿ ಹೊಂದಿರುವ ನಿಯಂತ್ರಕನು, ರಾಜ್ಯ ಸರ್ಕಾರದ ಪೂರ್ವಾನುಮೋದನೆ ಪಡೆದು,–

(i) ಸಾರ್ವಜನಿಕ ಹಿತದೃಷ್ಟಿಯಿಂದ ಯಾವುದೇ ಬಗೆಯ ಸಾರ್ವಜನಿಕ ವಾಹನಗಳ ಸಂಖ್ಯೆಯನ್ನು ಪರಿಮಿತಿಗೊಳಿಸಲು ಅಧಿಕಾರ ಹೊಂದಿರತಕ್ಕದ್ದು. ಅಂಥ ಸಂದರ್ಭದಲ್ಲಿ ಆ ವಿವರಣೆಯ ಯಾವುದೇ ವಾಹನವನ್ನು ಯಾವುದೇ ವರ್ಷದಲ್ಲಿ ಹಾಗೆ ಪರಿಮಿತಿಗೊಳಿಸಿದ ಸಂಖ್ಯೆಗಿಂತ ಹೆಚ್ಚು ಸಂಖ್ಯೆಯಲ್ಲಿ ನೋಂದಾಯಿಸತಕ್ಕದ್ದಲ್ಲ.

(ii) ಸಾರ್ವಜನಿಕ ಹಿತದೃಷ್ಟಿಯಿಂದ ಒಂದು ನಿರ್ದಿಷ್ಟ ವಿವರಣೆಯ ಸಾರ್ವಜನಿಕ ವಾಹನಗಳ ನೋಂದಣಿಯನ್ನು ನಿರಾಕರಿಸುವುದು ಅವಶ್ಯವೆಂದು ಭಾವಿಸಿದ್ದರೆ, ಅಂಥ ಸಂದರ್ಭದಲ್ಲಿ ಆ ವಿವರಣೆಯ ಯಾವುದೇ ವಾಹನವನ್ನು ನೋಂದಣಿ ಮಾಡತಕ್ಕದ್ದಲ್ಲ.

13. **ಕನಿಷ್ಠ ಅಥವಾ ಗರಿಷ್ಠ ದರಗಳು ಅಥವಾ ಸಾಗಣೆ ಬಾಡಿಗೆಗಳು.–** (1) ರಾಜ್ಯ ಸರ್ಕಾರದ ಮಂಜೂರಾತಿ ಪಡೆದು ನಿಯಂತ್ರಕನು ನಿರ್ದಿಷ್ಟಪಡಿಸಿ ಪ್ರಕಟಿಸಬಹುದಾದಂಥ ದರಗಳು ಮತ್ತು ಸಾಗಣೆ ಬಾಡಿಗೆಗಳನ್ನು ಪ್ರತಿಯೊಂದು ಸಾರ್ವಜನಿಕ ವಾಹನದ ಮಾಲೀಕ ಅಥವಾ ಚಾಲಕನು ಅಂಥ ವಾಹನದ ಬಾಡಿಗೆಯಾಗಿ ಕೇಳಬಹುದು ಮತ್ತು ಪಡೆಯಬಹುದು:

ಪರಂತು, ಹಾಗೆ ನಿಗದಿಪಡಿಸಿದ ದರಕ್ಕಿಂತ ಕಡಿಮೆ ದರವನ್ನು ಸ್ವೀಕರಿಸಲು ಯಾವುದೇ ಒಪ್ಪಂದವನ್ನು ಮಾಡಿಕೊಂಡಿದ್ದರೆ ಆ ಮಾಲೀಕ ಅಥವಾ ಚಾಲಕನು ಅದಕ್ಕೆ ಬದ್ಧನಾಗಿರತಕ್ಕದ್ದು.

(2) ಯಾರೇ ಮಾಲೀಕನು ಅಥವಾ ಚಾಲಕನು, ಇಳಿಸಿದ ಸ್ಥಳದಿಂದ ವಾಹನವು ಮರಳಿ ಬರುವುದಕ್ಕಾಗಿ ಯಾವುದೇ ಮೊತ್ತವನ್ನು ಮರಳಿ ಬರುವ ಬಾಡಿಗೆಯಾಗಿ ಸದರಿ ದರಕ್ಕಿಂತ ಹೆಚ್ಚಿಗೆ ಕೇಳತಕ್ಕದ್ದಲ್ಲ ಅಥವಾ ಪಡೆಯತಕ್ಕದ್ದಲ್ಲ.

14. **ಸಾರ್ವಜನಿಕ ವಾಹನದಲ್ಲಿ ಒಯ್ಯಬಹುದಾದ ಪ್ರಯಾಣಿಕರ ಸಂಖ್ಯೆ ಮತ್ತು ಸರಕುಗಳ ಪ್ರಮಾಣ.–** (1) ಈ ಮುಂದೆ ನಿರ್ದಿಷ್ಟಪಡಿಸಿರುವಂಥ ವಿವರಣೆಯ ಪ್ರತಿಯೊಂದು ಸಾರ್ವಜನಿಕ ವಾಹನದ ಮೂಲಕ ಒಯ್ಯಬಹುದಾದ ವ್ಯಕ್ತಿಗಳ ಗರಿಷ್ಠ ಸಂಖ್ಯೆಯು ಈ ಮುಂದಿನಂತಿರತಕ್ಕದ್ದು:–

| | | |
|---|---|---|
| (ಎ) | ಪ್ರಾಣಿಯಿಂದ ಅಥವಾ ಪ್ರಾಣಿಗಳು ಎಳೆಯುವ ನಾಲ್ಕು ಚಕ್ರದ ವಾಹನ | ಚಾಲಕನೂ ಸೇರಿದಂತೆ ಆರು ಜನ |
| (ಬಿ) | ಜಟಕಾ ಮತ್ತು ಎತ್ತಿನಗಾಡಿಯೂ ಸೇರಿದಂತೆ ಪ್ರಾಣಿಯಿಂದ ಅಥವಾ ಪ್ರಾಣಿಗಳು ಎಳೆಯುವ ಎರಡು ಚಕ್ರದ ವಾಹನ | ಎತ್ತಿನ ಬಂಡಿಗಳ ಸಂದರ್ಭದಲ್ಲಿ ಚಾಲಕನೂ ಸೇರಿದಂತೆ ಆರರಿಂದ ಒಂಬತ್ತು ಜನ ಮತ್ತು ಜಟಕಾಗಳ ಸಂದರ್ಭದಲ್ಲಿ ಚಾಲಕನೂ ಸೇರಿದಂತೆ ಐದು ಜನ |

***ಸೂಚನೆ:–*** ಈ ನಿಯಮಗಳ ಉದ್ದೇಶಕ್ಕಾಗಿ ಐದರಿಂದ ಹತ್ತು ವರ್ಷದೊಳಗಿನ ಇಬ್ಬರು ಮಕ್ಕಳನ್ನು ಅಥವಾ ಐದು ವರ್ಷದೊಳಗಿನ ಮೂವರು ಮಕ್ಕಳನ್ನು ಒಬ್ಬ ವಯಸ್ಕನೆಂದು ಪರಿಗಣಿಸತಕ್ಕದ್ದು.

(2) ಈ ಮುಂದಿನ ವಿವರಣೆಯ ಪ್ರತಿಯೊಂದು ವಾಹನದ ಮೂಲಕ ಸಾಗಿಸಬಹುದಾದ ಕೇವಲ ಗಂಟುಮೂಟೆ ಅಥವಾ ಗಂಟುಮೂಟೆ ಹಾಗೂ ಪ್ರಯಾಣಿಕನ ಗರಿಷ್ಠ ಭಾರವು ಈ ಮುಂದಿನಂತಿರತಕ್ಕದ್ದು:-

| | ಕೆಜಿಗಳು |
|---|---|
| (ಎ) ಎರಡು ಕುದುರೆಗಳು ಎಳೆಯುವ ವಾಹನದ ಮೂಲಕ | 635 |
| (ಬಿ) ಒಂದು ಕುದುರೆಯು ಎಳೆಯುವ ವಾಹನದ ಮೂಲಕ | 362 |
| (ಸಿ) ನಲವತ್ತೆಂಟು ಅಂಗುಲಗಳಿಗಿಂತ ಕಡಿಮೆ ಇರುವ ಗಿಡ್ಡ ಕುದುರೆಯು ಎಳೆಯುವ ವಾಹನದ ಮೂಲಕ | 281 |
| (ಡಿ) ಎರಡು ಎತ್ತುಗಳು ಎಳೆಯುವ ವಾಹನದ ಮೂಲಕ | 1,132 |
| (ಇ) ಒಂದು ಎತ್ತು ಎಳೆಯುವ ವಾಹನದ ಮೂಲಕ | 581 |

(3) ಪ್ರಯಾಣಿಕರನ್ನು ಮತ್ತು ಗಂಟುಮೂಟೆಯನ್ನು ಸಾಗಿಸುವಾಗ, ಪ್ರತಿಯೊಬ್ಬ ವಯಸ್ಕ ವ್ಯಕ್ತಿ, 56 ಕಿಲೋ ತೂಗುತ್ತಾನೆಂದು ಮತ್ತು ಹತ್ತು ವರ್ಷದೊಳಗಿನ ಪ್ರತಿಯೊಂದು ಮಗು 28 ಕಿಲೋ ತೂಗುತ್ತದೆಂದೂ ಪರಿಗಣಿಸತಕ್ಕದ್ದು.

**15. ಸಾರ್ವಜನಿಕ ವಾಹನದಲ್ಲಿ ಗಂಟುಮೂಟೆಗಳನ್ನು ಅಥವಾ ಸರಕುಗಳನ್ನು ಸಾಗಿಸಬಹುದಾದ ಷರತ್ತುಗಳು.–** (1) ಯಾರೇ ವ್ಯಕ್ತಿಯು, ಯಾವುದೇ ವಾಹನದಲ್ಲಿ ಹೇರನ್ನು ವಾಹನದ ಮುಂಭಾಗದ ತುದಿಯಿಂದ ಹೊರ ಚಾಚಿಕೊಂಡಿರುವ ಹಾಗೆ ಅಥವಾ ವಾಹನದ ಹಿಂಭಾಗದಲ್ಲಿ ಐದು ಅಡಿಗಳಿಗೂ ಮೀರಿ ಹೊರಚಾಚಿಕೊಂಡಿರುವ ಹಾಗೆ ಅಥವಾ ಒಂದಕ್ಕಿಂತ ಹೆಚ್ಚಿನ ವಾಹನಗಳನ್ನು ಉಪಯೋಗಿಸಿದಲ್ಲಿ ಕೊನೆಯ ವಾಹನದ ಹಿಂಭಾಗದಲ್ಲಿ ಐದು ಅಡಿಗಳಿಗೂ ಮೀರಿ ಹೊರಚಾಚಿಕೊಂಡಿರುವ ಹಾಗೆ ಹೇರತಕ್ಕದ್ದಲ್ಲ ಅಥವಾ ಹೇರುವುದಕ್ಕೆ ಅನುಮತಿ ನೀಡತಕ್ಕದ್ದಲ್ಲ.

**ಟಿಪ್ಪಣಿ:–** ನಿಯಂತ್ರಕನು, ನಿರ್ದಿಷ್ಟಪಡಿಸಲಾದ ವರ್ಗಗಳ ವಾಹನಗಳ ಸಂಬಂಧದಲ್ಲಿ ನಿರ್ದಿಷ್ಟಪಡಿಸಲಾದ ವೇಳೆಗಳಲ್ಲಿ, ನಿರ್ದಿಷ್ಟಪಡಿಸಲಾದ ರಸ್ತೆಗಳಲ್ಲಿ, ನಿರ್ದಿಷ್ಟಪಡಿಸಲಾದ ಮಟ್ಟಿಗೆ ಸದರಿ ಷರತ್ತುಗಳನ್ನು ಸಡಿಲಿಸಬಹುದು.

(2) ವಾಹನದ ಹಿಂಭಾಗದ ತುದಿಯಿಂದ ಅಥವಾ ಜೋಡಿಸಲಾದ ಕೊನೆಯ ವಾಹನದ ಹಿಂಭಾಗದ ತುದಿಯಿಂದ ಮೂರು ಅಡಿಗಳಿಗೂ ಮೀರಿ ಹೊರಚಾಚಿಕೊಂಡಿರುವಂಥ ಯಾವುದೇ ಹೇರನ್ನು ಸಾಗಿಸುತ್ತಿದ್ದರೆ:–

(ಎ) ಸೂರ್ಯೋದಯದ ಅರ್ಧಗಂಟೆಯ ನಂತರ ಮತ್ತು ಸೂರ್ಯಾಸ್ತದ ಅರ್ಧಗಂಟೆಯ ಮುಂಚಿನ ನಡುವಿನ ಅವಧಿಯಲ್ಲಿ 2 X 2 ಅಡಿ ಅಳತೆಗಿಂತ ಕಡಿಮೆ ಇಲ್ಲದ ಕೆಂಪುಬಾವುಟವನ್ನು ; ಮತ್ತು

(ಬಿ) ಇತರ ಸಮಯಗಳಲ್ಲಿ ಆ ವಾಹನವು ಒಯ್ಯಬೇಕೆಂದು ಅಗತ್ಯಪಡಿಸಲಾಗಿರುವಂಥ ಯಾವುವೇ ಇತರ ದೀಪಗಳ ಜೊತೆಗೆ ಹಿಂಭಾಗದಲ್ಲಿ ಕೆಂಪು ಬೆಳಕು ನೀಡುವ ದೀಪವನ್ನು

-- ಅಂಥ ಹೇರಿನ ತುದಿಗೆ ಕಟ್ಟಿರತಕ್ಕದ್ದು .

**16. ಒಯ್ಯಬೇಕಾದ ಸಾರ್ವಜನಿಕ ವಾಹನದ ನಿರ್ಮಿತಿ, ಜೋಡಣೆಗಳು ಮತ್ತು ಸಾಧನ ಸಾಮಗ್ರಿಗಳು.–** ಯಾವುದೇ ಸಾರ್ವಜನಿಕ ವಾಹನವು ರಸ್ತೆಯಲ್ಲಿ ಓಡಲು ಯೋಗ್ಯವಿದ್ದ ಹೊರತು ಅದನ್ನು ನೋಂದಣಿಗಾಗಿ ತರತಕ್ಕದ್ದಲ್ಲ. ಸ್ಪ್ರಿಂಗ್‌ಗಳು ಮತ್ತು ಆಕ್ಸಲ್‌ಗಳು ಉತ್ತಮ ರೀತಿಯಲ್ಲಿರತಕ್ಕದ್ದು ಮತ್ತು ವಾಹನವು ಕಟ ಕಟ ಸದ್ದನ್ನು ಮಾಡುವಂತಿರತಕ್ಕದ್ದಲ್ಲ. ಮೇಲ್ಛಾವಣಿಯನ್ನು ಸರಿಯಾಗಿ ಮುಚ್ಚಿರತಕ್ಕದ್ದು. ಕಿಟಕಿಗಳು ಮತ್ತು ಪಟ್ಟಿ ಮುಚ್ಚುಗೆಗಳು ಉಪಯೋಗಿಸುವ ಸ್ಥಿತಿಯಲ್ಲಿ ಇರತಕ್ಕದ್ದು. ಎಲ್ಲ ದೃಷ್ಟಿಯಿಂದಲೂ ಸಾಕಷ್ಟು ದೀಪ ಅಥವಾ ದೀಪಗಳು ಇರತಕ್ಕದ್ದು. ಮೆತ್ತೆಗಳನ್ನು ಸೂಕ್ತವಾದ ಹೊದಿಕೆಯಿಂದ ಮುಚ್ಚಿದ್ದು ಅವು ಸ್ವಚ್ಛವಾಗಿರತಕ್ಕದ್ದು ಮತ್ತು ನೈರ್ಮಲ್ಯಕರವಾಗಿರತಕ್ಕದ್ದು.

**17. ಸಾರ್ವಜನಿಕ ವಾಹನದಲ್ಲಿ ಬಿಟ್ಟುಹೋದ ಸ್ವತ್ತಿನ ವಿಲೆ.–** (1) ಪ್ರತಿಯೊಂದು ಸಾರ್ವಜನಿಕ ವಾಹನದ ಮಾಲೀಕ ಅಥವಾ ಚಾಲಕನು, ಯಾರೇ ವ್ಯಕ್ತಿಯು ಅದರಲ್ಲಿ ಬಿಟ್ಟು ಹೋಗಿರುವ ಯಾವುದೇ ಸ್ವತ್ತನ್ನು ಹತ್ತಿರದ ಪೊಲೀಸ್ ಠಾಣೆಗೆ ಒಯ್ಯತಕ್ಕದ್ದು ಮತ್ತು ಅಂಥ ಪೊಲೀಸ್ ಠಾಣೆಯಲ್ಲಿ ಕರ್ತವ್ಯದಲ್ಲಿರುವ ಅಧಿಕಾರಿಯ ವಶಕ್ಕೆ ಅದನ್ನು ಒಪ್ಪಿಸತಕ್ಕದ್ದು.

(2) ಸದರಿ ಅಧಿಕಾರಿಯು ಕೂಡಲೇ, ನಮೂದು ಮಾಡುವ ಉದ್ದೇಶಕ್ಕಾಗಿ ಇಟ್ಟಿರುವ ರಿಜಿಸ್ಟರಿನಲ್ಲಿ,–

(ಎ) ಸ್ವತ್ತಿನ ವಿವರ;

(ಬಿ) ಅದನ್ನು ತಂದ ಚಾಲಕ ಅಥವಾ ಇತರ ವ್ಯಕ್ತಿಯ ಹೆಸರು ಮತ್ತು ವಿಳಾಸ;

(ಸಿ) ಯಾವ ಸಾರ್ವಜನಿಕ ವಾಹನದಲ್ಲಿ ಸ್ವತ್ತನ್ನು ಬಿಟ್ಟು ಹೋಗಿದೆಯೋ ಅದರ ಮಾಲೀಕನ ಹೆಸರು ಮತ್ತು ವಿಳಾಸ ಮತ್ತು ಆ ವಾಹನದ ನೋಂದಣಿ ಸಂಖ್ಯೆ; ಮತ್ತು

(ಡಿ) ಸ್ವತ್ತನ್ನು ತಂದ ದಿನ ಮತ್ತು ಸಮಯ

-- ಇವುಗಳನ್ನು ನಮೂದಿಸತಕ್ಕದ್ದು ಮತ್ತು ಸ್ವತ್ತನ್ನು ತಂದ ವ್ಯಕ್ತಿಗೆ ಅದನ್ನು ಸ್ವೀಕರಿಸಿದ ಬಗ್ಗೆ ಸ್ವೀಕೃತಿಯನ್ನು ನೀಡತಕ್ಕದ್ದು.

(3) ಅಂಥ ಸ್ವತ್ತನ್ನು ಒಪ್ಪಿಸುವುದಕ್ಕಾಗಿ ಮಾಲೀಕನಿಗೆ ಅಥವಾ ಚಾಲಕನಿಗೆ ತಗುಲಿದ ಎಲ್ಲ ಖರ್ಚುಗಳನ್ನು ಮತ್ತು ಅದರ ಜೊತೆಗೆ ಮಾಲೀಕ ಅಥವಾ ಚಾಲಕನಿಗೆ ನಿಯಂತ್ರಕನು ಬಹುಮಾನವಾಗಿ ನೀಡಬಹುದಾದಂಥ ಯುಕ್ತವಾದ ಮೊತ್ತವನ್ನು ಸಂದಾಯ ಮಾಡಿದ ಮೇಲೆ, ಅದು ತನಗೆ ಸೇರಿದೆಯೆಂದು ನಿಯಂತ್ರಕನಿಗೆ ಮನದಟ್ಟು ಮಾಡಿಕೊಟ್ಟ ವ್ಯಕ್ತಿಗೆ ಅದನ್ನು ಕೊಡತಕ್ಕದ್ದು:

ಪರಂತು, ಸ್ವತ್ತನ್ನು ಒಪ್ಪಿಸಿದ ದಿನಾಂಕದಿಂದ ಆರು ತಿಂಗಳ ಒಳಗಾಗಿ, ಆ ಸ್ವತ್ತನ್ನು ಯಾರೂ ಕ್ಲೇಮು ಮಾಡದಿದ್ದಲ್ಲಿ ಅಥವಾ ಮಾಲೀಕತ್ವ ಸ್ಥಾಪಿತವಾಗದಿದ್ದಲ್ಲಿ, ನಿಯಂತ್ರಕನು, ಸ್ವತ್ತಿನ ಬಗ್ಗೆ ಜಾಹೀರಾತು ನೀಡುವಂತೆ ಮತ್ತು ಸಾರ್ವಜನಿಕ ಹರಾಜಿನಲ್ಲಿ ಮಾರಾಟ ಮಾಡುವಂತೆ ವ್ಯವಸ್ಥೆ ಮಾಡತಕ್ಕದ್ದು ಮತ್ತು ವೆಚ್ಚಗಳನ್ನು ಮುರಿದುಕೊಂಡ ತರುವಾಯ ಮಾರಾಟದಿಂದ ಬಂದ ಹಣವು ರಾಜ್ಯ ಸರ್ಕಾರಕ್ಕೆ ಮುಟ್ಟುಗೋಲಾಗತಕ್ಕದ್ದು:

ಮತ್ತೂ ಪರಂತು, ಆ ಸ್ವತ್ತು ಶೀಘ್ರವಾಗಿ ಮತ್ತು ಸ್ವಾಭಾವಿಕವಾಗಿ ಹಾಳಾಗುವಂಥದ್ದಾಗಿದ್ದರೆ, ನಿಯಂತ್ರಕನು, ಅಂಥ ಸ್ವತ್ತನ್ನು ಸಾರ್ವಜನಿಕ ಹರಾಜಿನ ಮೂಲಕ ಮಾರಾಟ ಮಾಡತಕ್ಕದ್ದು ಮತ್ತು ಎಲ್ಲ ವೆಚ್ಚಗಳನ್ನು ಮುರಿದುಕೊಂಡ ತರುವಾಯ ಮಾರಾಟದಿಂದ ಬಂದ ಹಣವನ್ನು ಆ ಸ್ವತ್ತಿನ ಮಾಲೀಕನು ಹಣದ ಬಗ್ಗೆ ತನ್ನ ಕ್ಲೇಮನ್ನು ಸ್ಥಾಪಿಸಿದರೆ, ಅಂಥ ಮಾಲೀಕನಿಗೆ ಸಂದಾಯ ಮಾಡತಕ್ಕದ್ದು ಮತ್ತು ಆ ಸ್ವತ್ತನ್ನು ಒಪ್ಪಿಸಿದ ದಿನಾಂಕದಿಂದ ಆರು ತಿಂಗಳ ಒಳಗಾಗಿ, ಅಂಥ ಹಣಕ್ಕಾಗಿ ಕ್ಲೇಮು ಬಾರದಿದ್ದಲ್ಲಿ, ಅದು ರಾಜ್ಯ ಸರ್ಕಾರಕ್ಕೆ ಮುಟ್ಟುಗೋಲಾಗತಕ್ಕದ್ದು.

18. **ಸಾರ್ವಜನಿಕ ವಾಹನಗಳ ಬಳಕೆ.–** (1) ತಾನು ಅಂಟು ರೋಗ ಅಥವಾ ಸೋಂಕು ರೋಗದಿಂದ ಬಳಲುತ್ತಿರುವೆನೆಂದು ತಿಳಿದಿರುವ ಯಾರೇ ವ್ಯಕ್ತಿಯು, ವಾಹನದ ಮಾಲೀಕನ ಅಥವಾ ಅದರ ಪ್ರಭಾರದಲ್ಲಿರುವ ಚಾಲಕನ ಪೂರ್ವಾನುಮತಿಯಿಲ್ಲದೆ, ಯಾವುದೇ ಸಾರ್ವಜನಿಕ ವಾಹನದ ಒಳಗೆ ಪ್ರವೇಶಿಸತಕ್ಕದ್ದಲ್ಲ.

(2) ಅಂಟುರೋಗ ಅಥವಾ ಸೋಂಕು ರೋಗದಿಂದ ಬಳಲುತ್ತಿದ್ದಾನೆಂದು ತಾನು ತಿಳಿದಿರುವ ಅಥವಾ ನಂಬುವುದಕ್ಕೆ ಕಾರಣವಿರುವ ವ್ಯಕ್ತಿಯ ಆರೈಕೆ ಮಾಡುವ ಯಾರೇ ವ್ಯಕ್ತಿಯು, ಆ ವ್ಯಕ್ತಿಯನ್ನು ಯಾವುದೇ ಸಾರ್ವಜನಿಕ ವಾಹನದಲ್ಲಿ ವಾಹನದ ಮಾಲೀಕ ಅಥವಾ ವಾಹನದ ಪ್ರಭಾರದಲ್ಲಿರುವ ಚಾಲಕನ ಪೂರ್ವಾನುಮತಿಯಿಲ್ಲದೆ ಕರೆದುಕೊಂಡು ಹೋಗುವಂತೆ ಮಾಡತಕ್ಕದ್ದಲ್ಲ.

(3) ಸಾರ್ವಜನಿಕ ವಾಹನದ ಮಾಲೀಕ ಅಥವಾ ಚಾಲಕನು, ಯಾವುದೇ ಸಮಯದಲ್ಲಿ, ಅಂಟುರೋಗದಿಂದ ಅಥವಾ ಸೋಂಕು ರೋಗದಿಂದ ಬಳಲುತ್ತಿರುವನೆಂದು ತಿಳಿದಿರುವ ಅಥವಾ ನಂಬಲು ಕಾರಣವಿರುವ ವ್ಯಕ್ತಿಯನ್ನು ಅದರಲ್ಲಿ ಒಯ್ಯತಕ್ಕದ್ದಲ್ಲ:

ಪರಂತು, ಯಾವುದೇ ತುರ್ತು ಸಂದರ್ಭದಲ್ಲಿ ಅಂಟುರೋಗ ಅಥವಾ ಸೋಂಕು ರೋಗದಿಂದ ಬಳಲುತ್ತಿರುವ ವ್ಯಕ್ತಿಯನ್ನು ಸಾರ್ವಜನಿಕ ವಾಹನದಲ್ಲಿ ಒಯ್ಯಬಹುದು, ಆದರೆ, ಆರೋಗ್ಯ ಇಲಾಖೆಯು ಅಧಿಸೂಚಿಸಿದ ನಿರ್ಬಂಧಗಳು ಮತ್ತು ಸುರಕ್ಷತಾ ಕ್ರಮಗಳು, ಯಾವುವಾದರೂ ಇದ್ದರೆ ಅವುಗಳನ್ನು ಪಾಲಿಸಿರಬೇಕು.

(4) ಯಾವುದೇ ಸಾರ್ವಜನಿಕ ವಾಹನದ ಮಾಲೀಕ ಅಥವಾ ಚಾಲಕನು ಮುಂದೆ ಬರುವ ಉಪನಿಯಮದ ಉಪಬಂಧಗಳ ಕಾರಣದಿಂದ ತಗಲಬಹುದಾದ ಯಾವುದೇ ನಷ್ಟವನ್ನು ಮತ್ತು ವೆಚ್ಚವನ್ನು ತುಂಬಿ ಕೊಡುವುದಕ್ಕೆ ಸಾಕಾಗುವಷ್ಟು ಮೊತ್ತವನ್ನು ಅಂಟುರೋಗದಿಂದ ಅಥವಾ ಸೋಂಕು ರೋಗದಿಂದ ಬಳಲುತ್ತಿರುವ ಯಾರೇ ವ್ಯಕ್ತಿಯು ಸಂದಾಯ ಮಾಡುವವರೆಗೂ ಅವನನ್ನು ಒಯ್ಯಲು ನಿರಾಕರಿಸಬಹುದು.

(5) ಅಂಟುರೋಗ ಅಥವಾ ಸೋಂಕು ರೋಗದಿಂದ ಬಳಲುತ್ತಿರುವ ವ್ಯಕ್ತಿಯನ್ನು ಸಾರ್ವಜನಿಕ ವಾಹನದಲ್ಲಿ ಒಯ್ದಿರುವಲ್ಲಿ, ಆ ವಾಹನದ ಪ್ರಭಾರದಲ್ಲಿರುವ ವ್ಯಕ್ತಿಯು ಆ ವಾಹನವನ್ನು ಸಾಮಾನ್ಯವಾಗಿ ಇಟ್ಟಿರುವಂಥ ಸ್ಥಳೀಯ ಪ್ರದೇಶದ ಆರೋಗ್ಯಾಧಿಕಾರಿಗೆ ಆದಷ್ಟು ಬೇಗನೆ ತಿಳಿಸತಕ್ಕದ್ದು ಮತ್ತು ಯಾರೇ ಇತರ ವ್ಯಕ್ತಿಗೆ ವಾಹನದೊಳಗೆ ಪ್ರವೇಶಿಸಲು ಅನುಮತಿ ನೀಡುವುದಕ್ಕೆ ಮುಂಚೆ, ಅದರ ಸೋಂಕು ನಿವಾರಣೆಗೊಳಿಸುವಂತೆ ಮಾಡತಕ್ಕದ್ದು.

(6) ಆರೋಗ್ಯಾಧಿಕಾರಿ ಅಥವಾ ವೈದ್ಯಾಧಿಕಾರಿಯು ನಿರ್ದಿಷ್ಟಪಡಿಸಿದಂಥ ರೀತಿಯಲ್ಲಿ, ಚಾಲಕನ ಮತ್ತು ವಾಹನದ ಸೋಂಕು ನಿವಾರಣೆಗೊಳಿಸುವವರೆಗೆ ಮತ್ತು ಆ ಬಗ್ಗೆ ಪ್ರಮಾಣಪತ್ರ ಪಡೆದುಕೊಳ್ಳುವವರೆಗೆ, ವಾಹನವನ್ನು ಬಳಸತಕ್ಕದ್ದಲ್ಲ.

19. **ನಿರಸನ ಮತ್ತು ಉಳಿಸುವಿಕೆಗಳು.–** ಅಧಿನಿಯಮದ 24 ನೇ ಪ್ರಕರಣದ ಮೂಲಕ ನಿರಸಿತವಾದ ಯಾವುದೇ ಅಧಿನಿಯಮಿತಿಯ ಅಡಿಯಲ್ಲಿ ರಚಿಸಲಾದ ಹಿಂದೆ ಹೇಳಿದ ನಿಯಮಗಳಿಗೆ ಸಂವಾದಿಯಾದ ಎಲ್ಲ ನಿಯಮಗಳನ್ನು ಈ ಮೂಲಕ ನಿರಸನಗೊಳಿಸಲಾಗಿದೆ:

ಪರಂತು, ಆ ನಿರಸನವು,–

(ಎ) ಹಾಗೆ ನಿರಸಿತವಾದ ನಿಯಮಗಳ ಹಿಂದಿನ ಕಾರ್ಯಾಚರಣೆಯನ್ನು ಅಥವಾ ಅದರ ಅಡಿಯಲ್ಲಿ ಯುಕ್ತವಾಗಿ ಮಾಡಲಾದ ಅಥವಾ ಮಾಡಲು ಎಡೆಗೊಟ್ಟ ಯಾವುದೇ ಕೃತ್ಯವನ್ನು ;

(ಬಿ) ಹಾಗೆ ನಿರಸಿತವಾದ ಯಾವುದೇ ನಿಯಮದ ಅಡಿಯಲ್ಲಿ ಆರ್ಜಿಸಿದ, ಪ್ರಾಪ್ತವಾದ ಅಥವಾ ಭರಿಸಲಾದ ಯಾವುದೇ ಹಕ್ಕು, ವಿಶೇಷಾಧಿಕಾರ, ಹೊಣೆಗಾರಿಕೆ ಅಥವಾ ದಾಯಿತ್ವವನ್ನು; ಅಥವಾ

(ಸಿ) ಹಾಗೆ ನಿರಸಿತವಾದ ಯಾವುದೇ ನಿಯಮದ ವಿರುದ್ಧ ಮಾಡಲಾದ ಯಾವುದೇ ಅಪರಾಧದ ಸಂಬಂಧದಲ್ಲಿ ಗುರಿಯಾದ ಯಾವುದೇ ದಂಡ, ಮುಟ್ಟುಗೋಲು ಅಥವಾ ಶಿಕ್ಷೆಯನ್ನು ;

(ಡಿ) ಹಿಂದೆ ಹೇಳಿರುವಂಥ ಯಾವುದೇ ಹಕ್ಕು, ವಿಶೇಷಾಧಿಕಾರ, ಹೊಣೆಗಾರಿಕೆ, ದಾಯಿತ್ವ, ದಂಡ, ಮುಟ್ಟುಗೋಲು ಅಥವಾ ದಂಡನೆಗೆ ಸಂಬಂಧಿಸಿದಂತೆ ಯಾವುದೇ ತನಿಖೆ ಅಥವಾ ಕಾನೂನು ವ್ಯವಹರಣೆ ಅಥವಾ ಪರಿಹಾರವನ್ನು ಬಾಧಿಸತಕ್ಕದ್ದಲ್ಲ, ಮತ್ತು ಅಂಥ ಯಾವುದೇ ತನಿಖೆ, ಕಾನೂನು ವ್ಯವಹರಣೆ ಅಥವಾ ಪರಿಹಾರವನ್ನು ಅಂಥ ನಿಯಮಗಳನ್ನು ನಿರಸನಗೊಳಿಸಿಲ್ಲದಿದ್ದರೆ ಹೇಗೋ ಹಾಗೆ ಹೂಡಬಹುದು, ಮುಂದುವರೆಸಬಹುದು ಅಥವಾ ಜಾರಿಗೊಳಿಸಬಹುದು ಮತ್ತು ಅಂಥ ಯಾವುದೇ ದಂಡವನ್ನು, ಮುಟ್ಟುಗೋಲನ್ನು ಅಥವಾ ಶಿಕ್ಷೆಯನ್ನು ವಿಧಿಸಬಹುದು:

ಮತ್ತೂ ಪರಂತು, ಅಧಿನಿಯಮ ಅಥವಾ ಸಂದರ್ಭಾನುಸಾರ, ಈ ನಿಯಮಗಳ ಅಡಿಯಲ್ಲಿ ಮಾಡಲಾದ ಯಾವುದೇ ಕೃತ್ಯವನ್ನು ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ರದ್ದುಗೊಳಿಸಿದ ಹೊರತು ಮತ್ತು ರದ್ದುಗೊಳಿಸುವವರೆಗೆ ಮಾಡಲಾದ ಯಾವುದೇ ಕೃತ್ಯ ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು (ಮಾಡಲಾದ ಯಾವುದೇ ನೇಮಕಾತಿ, ಪ್ರತ್ಯಾಯೋಜನೆ, ಹೊರಡಿಸಲಾದ ಅಧಿಸೂಚನೆ, ಆದೇಶ, ಸೂಚನೆಗಳು ಅಥವಾ ನಿರ್ದೇಶನ, ಪಡೆಯಲಾದ ನಮೂನೆ, ಪ್ರಮಾಣಪತ್ರ, ಮಂಜೂರಾದ ಅನುಮತಿ ಪತ್ರ ಅಥವಾ ಲೈಸೆನ್ಸ್, ಮಾಡಿಕೊಡಲಾದ ನೋಂದಣಿಯೂ ಒಳಗೊಂಡಂತೆ) ಈ ನಿಯಮಗಳ ಸಂವಾದಿ ಉಪಬಂಧಗಳ ಅಡಿಯಲ್ಲಿ ಮಾಡಲಾದುದೆಂದು ಅಥವಾ ಕೈಗೊಳ್ಳಲಾದುದೆಂದು ಭಾವಿಸತಕ್ಕದ್ದು ಮತ್ತು ತದನುಸಾರವಾಗಿ ಅವು ಜಾರಿಯಲ್ಲಿರುವುದು ಮುಂದುವರಿಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ವಿ.ಎನ್. ಸುಬ್ಬಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ.

**ನಮೂನೆ ಸಂಖ್ಯೆ 1**
**ಸಾರ್ವಜನಿಕ ವಾಹನಗಳ ಅನುಮತಿ ಪತ್ರ**
**[3(1) ನೇ ನಿಯಮ ನೋಡಿ]**

| | |
|---|---|
| 1 | ನೋಂದಣಿ ಸಂಖ್ಯೆ |
| 2 | ಮಾಲೀಕನ ಹೆಸರು<br>ತಂದೆಯ ಹೆಸರು. . . . |
| 3 | ಮಾಲೀಕನ ವಿಳಾಸ |
| 4 | ಸಾರ್ವಜನಿಕ ವಾಹನಗಳನ್ನು ಎಳೆದೊಯ್ಯಲು ನಿಯೋಜಿಸಿಕೊಳ್ಳಬೇಕಾದ ಕುದುರೆಗಳ ಅಥವಾ ಇತರೆ ಪ್ರಾಣಿಗಳ ಸಂಖ್ಯೆ |
| 5 | ಸಾಗಿಸುವುದಕ್ಕೆ ಲೈಸೆನ್ಸ್ ನೀಡಿರುವ ಪ್ರಯಾಣಿಕರ ಸಂಖ್ಯೆ |
| 6 | ಸಾರ್ವಜನಿಕ ವಾಹನದ ವಿವರಣೆ/ವರ್ಗ ಮತ್ತು ಅದನ್ನು ನಿಲ್ಲಿಸುವ ಸ್ಥಳ |
| 7 | ಪ್ರಾಣಿಯ ವಿವರಣೆ |
| 8 | ಈ ಅನುಮತಿ ಪತ್ರವು . . . . . . ರಿಂದ . . . . . . ರವರೆಗೆ ಸಿಂಧುವಾಗಿರುತ್ತದೆ |

ದಿನಾಂಕ

ನಿಯಂತ್ರಕ

**ನಮೂನೆ ಸಂಖ್ಯೆ 1**
**ಸಾರ್ವಜನಿಕ ವಾಹನಗಳ ಅನುಮತಿ ಪತ್ರ**
**[3(1) ನೇ ನಿಯಮ ನೋಡಿ]**

| | |
|---|---|
| 1 | ನೋಂದಣಿ ಸಂಖ್ಯೆ |
| 2 | ಮಾಲೀಕನ ಹೆಸರು<br>ತಂದೆಯ ಹೆಸರು. . . . |
| 3 | ಮಾಲೀಕನ ವಿಳಾಸ |
| 4 | ಸಾರ್ವಜನಿಕ ವಾಹನಗಳನ್ನು ಎಳೆದೊಯ್ಯಲು ನಿಯೋಜಿಸಿಕೊಳ್ಳಬೇಕಾದ ಕುದುರೆಗಳ ಅಥವಾ ಇತರೆ ಪ್ರಾಣಿಗಳ ಸಂಖ್ಯೆ |
| 5 | ಸಾಗಿಸುವುದಕ್ಕೆ ಲೈಸೆನ್ಸ್ ನೀಡಿರುವ ಪ್ರಯಾಣಿಕರ ಸಂಖ್ಯೆ |
| 6 | ಸಾರ್ವಜನಿಕ ವಾಹನದ ವಿವರಣೆ/ವರ್ಗ ಮತ್ತು ಅದನ್ನು ನಿಲ್ಲಿಸುವ ಸ್ಥಳ |
| 7 | ಪ್ರಾಣಿಯ ವಿವರಣೆ |
| 8 | ಈ ಅನುಮತಿ ಪತ್ರವು . . . . . . ರಿಂದ . . . . . . ರವರೆಗೆ ಸಿಂಧುವಾಗಿರುತ್ತದೆ |

ದಿನಾಂಕ

ನಿಯಂತ್ರಕ

**ನಮೂನೆ ಸಂಖ್ಯೆ 2**
**[3(6) ನೇ ನಿಯಮ ನೋಡಿ]**
**ಸಾರ್ವಜನಿಕ ವಾಹನಗಳ ರಿಜಿಸ್ಟರು**

| ನೋಂದಣಿ ಸಂಖ್ಯೆ | ಮಾಲೀಕನ ಹೆಸರು | ಮಾಲೀಕನ ಮನೆ ವಿಳಾಸ | ಸಾರ್ವಜನಿಕ ವಾಹನಗಳನ್ನು ಎಳೆದೊಯ್ಯಲು ನಿಯೋಜಿಸಿಕೊಂಡಿರುವ ಕುದುರೆಗಳ ಅಥವಾ ಇತರೆ ಪ್ರಾಣಿಗಳ ಸಂಖ್ಯೆ | ಸಾರ್ವಜನಿಕ ವಾಹನದಲ್ಲಿ ಸಾಗಿಸುವುದಕ್ಕೆ ಲೈಸೆನ್ಸ್ ನೀಡಿರುವ ಪ್ರಯಾಣಿಕರ ಸಂಖ್ಯೆ | ಅನುಮತಿ ಪತ್ರ ದಿನಾಂಕ | ವಾಹನಗಳ ವಿವರಣೆ ವರ್ಗಗಳು | | | | | | | ಅನುಮತಿ ಪತ್ರ ಸಿಂಧುವಾಗಿರುವ ಅವಧಿ | ಸಂದಾಯ ಮಾಡಿರುವ ಫೀಜುಗಳು | ಷರಾ |
|---|---|---|---|---|---|---|---|---|---|---|---|---|---|---|---|
| | | | | | | I | II | III | IV | V | VI | VII | | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 |

## ನಮೂನೆ ಸಂಖ್ಯೆ 3

### ಸಾರ್ವಜನಿಕ ವಾಹನದ ಚಾಲಕನಿಗೆ ಲೈಸೆನ್ಸಿನ ನೀಡಿಕೆಗಾಗಿ / ನವೀಕರಣಕ್ಕಾಗಿ ಅರ್ಜಿ ನಮೂನೆ

ಕರ್ನಾಟಕ ಸಂಚಾರ (ಸಾರ್ವಜನಿಕ ವಾಹನಗಳ ನಿಯಂತ್ರಣ) ನಿಯಮಗಳು, 1979ರ 4 ನೇ ನಿಯಮದ ಅಡಿಯಲ್ಲಿ

1. ಹೆಸರು
2. ತಂದೆಯ ಹೆಸರು
3. ಬೀದಿಯ ಹೆಸರು
4. ಮನೆ ಸಂಖ್ಯೆ . . . . .ವಾರ್ಡ್ ಸಂಖ್ಯೆ / ಸ್ಥಳ
5. ಸಾರ್ವಜನಿಕ ವಾಹನದ ವಿವರಣೆ
6. ಪ್ರಾಣಿಯ ವಿವರಣೆ
7. ಸಾರ್ವಜನಿಕ ವಾಹನದ ಅನುಮತಿ ಪತ್ರ ಸಂಖ್ಯೆ
8. ದ್ವಿಪ್ರತಿಯಲ್ಲಿ ವೈದ್ಯಕೀಯ ಪ್ರಮಾಣಪತ್ರ ಮತ್ತು ಭಾವಚಿತ್ರಗಳನ್ನು ಲಗತ್ತಿಸಿದೆಯೇ?
9. ನವೀಕರಣದ ಸಂದರ್ಭದಲ್ಲಿ ಹಿಂದಿನ ಲೈಸೆನ್ಸಿನ ಸಂಖ್ಯೆ ಮತ್ತು ಅದನ್ನು ನೀಡಿದ ದಿನಾಂಕ

ದಿನಾಂಕ :

ಸಹಿ

ನಿಯಂತ್ರಕ.

## ನಮೂನೆ ಸಂಖ್ಯೆ 4

### ಸಾರ್ವಜನಿಕ ವಾಹನ ಚಾಲನೆಗೆ ಲೈಸೆನ್ಸ್

ಕರ್ನಾಟಕ ಸಂಚಾರ (ಸಾರ್ವಜನಿಕ ವಾಹನಗಳ ನಿಯಂತ್ರಣ) ನಿಯಮಗಳು, 1979ರ ಅಡಿಯಲ್ಲಿ

| | |
|---|---|
| 1 | ಲೈಸೆನ್ಸ್ ಸಂಖ್ಯೆ |
| 2 | ಹೆಸರು . . . . . . . |
| 3 | ವಿಳಾಸ (ಖಾಯಂ ವಿಳಾಸ) . . .<br>(ತಾತ್ಕಾಲಿಕ ವಿಳಾಸ) . . . . . |
| 4 | ಚಾಲಕನ ವಯಸ್ಸು |
| 5 | ಜಾತಿ |
| 6 | ಗುರುತು ಚಿಹ್ನೆಗಳು |
| 7 | ಚಾಲನೆಗೆ ಲೈಸೆನ್ಸ್ ನೀಡಿದ ಸಾರ್ವಜನಿಕ ವಾಹನಗಳ ಮತ್ತು ಪ್ರಾಣಿಗಳ ವಿವರಣೆ |
| 8 | ಲೈಸೆನ್ಸುದಾರನ ಭಾವಚಿತ್ರ |
| 9 | ಈ ಲೈಸೆನ್ಸ್ . . . . . . ರಿಂದ . . . . . . ರವರೆಗೆ ಸಿಂಧುವಾಗಿರುತ್ತದೆ |
| 10 | ಲೈಸೆನ್ಸುದಾರನ ಸಹಿ/ ಹೆಬ್ಬೆಟ್ಟಿನ ಗುರುತು |

ದಿನಾಂಕ: ನಿಯಂತ್ರಕ.

## ನಮೂನೆ ಸಂಖ್ಯೆ 4

### ಸಾರ್ವಜನಿಕ ವಾಹನ ಚಾಲನೆಗೆ ಲೈಸೆನ್ಸ್

ಕರ್ನಾಟಕ ಸಂಚಾರ (ಸಾರ್ವಜನಿಕ ವಾಹನಗಳ ನಿಯಂತ್ರಣ) ನಿಯಮಗಳು, 1979ರ ಅಡಿಯಲ್ಲಿ

| | |
|---|---|
| 1 | ಲೈಸೆನ್ಸ್ ಸಂಖ್ಯೆ |
| 2 | ಹೆಸರು |
| 3 | ವಿಳಾಸ (ಖಾಯಂ ವಿಳಾಸ) .........<br>(ತಾತ್ಕಾಲಿಕ ವಿಳಾಸ............. |
| 4 | ಚಾಲಕನ ವಯಸ್ಸು |
| 5 | ಜಾತಿ |
| 6 | ಗುರುತು ಚಿಹ್ನೆಗಳು |
| 7 | ಚಾಲನೆಗೆ ಲೈಸೆನ್ಸ್ ನೀಡಿದ ಸಾರ್ವಜನಿಕ ವಾಹನಗಳ ಮತ್ತು ಪ್ರಾಣಿಗಳ ವಿವರಣೆ |
| 8 | ಲೈಸೆನ್ಸುದಾರನ ಭಾವಚಿತ್ರ |
| 9 | ಈ ಲೈಸೆನ್ಸ್ . . . . . . ರಿಂದ . . . . . . ರವರೆಗೆ ಸಿಂಧುವಾಗಿರುತ್ತದೆ |
| 10 | ಲೈಸೆನ್ಸುದಾರನ ಸಹಿ/ ಹೆಬ್ಬೆಟ್ಟಿನ ಗುರುತು |

ದಿನಾಂಕ: ನಿಯಂತ್ರಕ.

## ನಮೂನೆ ಸಂಖ್ಯೆ 5

### ಕರ್ನಾಟಕ ಸಂಚಾರ (ಸಾರ್ವಜನಿಕ ವಾಹನಗಳ ನಿಯಂತ್ರಣ) ನಿಯಮಗಳು, 1979ರ 4 ನೇ ನಿಯಮದ ಅಡಿಯಲ್ಲಿ ಸಾರ್ವಜನಿಕ ವಾಹನಗಳ ಚಾಲಕರ ರಿಜಿಸ್ಟರು

| ಲೈಸೆನ್ಸ್ ಸಂಖ್ಯೆ | ಹೆಸರು | ವಿಳಾಸ | ಲೈಸೆನ್ಸ್ ಮಂಜೂರಾತಿಯ ದಿನಾಂಕ | ವಯಸ್ಸು | ಜಾತಿ | ಗುರುತು ಚಿಹ್ನೆಗಳು | ಚಾಲನೆಗೆ ಲೈಸೆನ್ಸ್ ನೀಡಿದ ಸಾರ್ವಜನಿಕ ವಾಹನದ ಮತ್ತು ಪ್ರಾಣಿಯ ವಿವರಣೆ | ಲೈಸೆನ್ಸ್ ಎಲ್ಲಿಯವರೆಗೆ ಸಿಂಧುವಾಗಿದೆ | ಭಾವ ಚಿತ್ರ | ಸಂದಾಯ ಮಾಡಿದ ಫೀಜು | ಷರಾ |
|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 |

## ನಮೂನೆ ಸಂಖ್ಯೆ 6

## ಕರ್ನಾಟಕ ಸಂಚಾರ (ಸಾರ್ವಜನಿಕ ವಾಹನಗಳ ನಿಯಂತ್ರಣ) ನಿಯಮಗಳು, 1979ರ 5 ನೇ ನಿಯಮದ ಅಡಿಯಲ್ಲಿ ಸಾರ್ವಜನಿಕ ವಾಹನಗಳ ಚಾಲಕರಿಗೆ ದ್ವಿಪ್ರತಿ ಲೈಸೆನ್ಸುಗಳ ಮತ್ತು ಅನುಮತಿ ಪತ್ರಗಳ ನೀಡಿಕೆಯನ್ನು ತೋರಿಸುವ ರಿಜಿಸ್ಟರು

| ಕ್ರಮ ಸಂಖ್ಯೆ | ಸಾರ್ವಜನಿಕ ವಾಹನದ ಅನುಮತಿ ಪತ್ರ ಸಂಖ್ಯೆ | ಸಂದಾಯ ಮಾಡಿದ ಫೀಜುಗಳು | ನೀಡಲಾದ ದಿನಾಂಕ | ಅನುಮತಿ ಪತ್ರದ ಅವಧಿ ಮುಗಿಯುವ ದಿನಾಂಕ | ಕ್ರಮ ಸಂಖ್ಯೆ | ಚಾಲಕನ ಲೈಸೆನ್ಸ್ ಸಂಖ್ಯೆ | ಸಂದಾಯ ಮಾಡಿದ ಫೀಜುಗಳು | ನೀಡಲಾದ ದಿನಾಂಕ | ಲೈಸೆನ್ಸಿನ ಅವಧಿ ಮುಗಿಯುವ ದಿನಾಂಕ | ದ್ವಿಪ್ರತಿ ಅನುಮತಿ ಪತ್ರ/ಲೈಸೆನ್ಸ್ ನೀಡುತ್ತಿರುವುದಕ್ಕೆ ಕಾರಣಗಳು | ಷರಾ |
|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 |

## ಪರಿಶಿಷ್ಟ 'ಎ'

## ಕರ್ನಾಟಕ ಸಂಚಾರ (ಸಾರ್ವಜನಿಕ ವಾಹನಗಳ ನಿಯಂತ್ರಣ) ನಿಯಮಗಳು, 1979ರ 8 ನೇ ನಿಯಮಕ್ಕೆ ಅನುಸಾರವಾಗಿ ಸಾರ್ವಜನಿಕ ವಾಹನಗಳ ಚಾಲಕರ ಗುರುತು ಬಿಲ್ಲೆಗಳ ವಿವರಣೆ

**8 ಸೆಂ.ಮೀ**

ಸಾರ್ವಜನಿಕ ವಾಹನ ಚಾಲಕರ ಗುರುತು ಬಿಲ್ಲೆ

ಸಂಖ್ಯೆ ವರ್ಗ 5 ಸೆಂ.ಮಿ

**ವಿ.ಸೂ:** ಮುಂಭಾಗದಲ್ಲಿ ಪಾಲಿಷ್ ಮಾಡಿರುವ ಮತ್ತು ಆಯತಾಕಾರದಲ್ಲಿರುವ ಹಿತ್ತಾಳೆಯಿಂದ ಮಾಡಲಾದ ಲೋಹದ ವಸ್ತು.

**[1][ಅಧಿಸೂಚನೆ V. ಸಂಖ್ಯೆ ಎಚ್ ಡಿ 53 ಟಿಎಂಆರ್ 76, ಬೆಂಗಳೂರು, ದಿನಾಂಕ 2 ನೇ ಆಗಸ್ಟ್ 1979**

ಕರ್ನಾಟಕ ಸಂಚಾರ (ಸಾರ್ವಜನಿಕ ವಾಹನಗಳ ನಿಯಂತ್ರಣ) ನಿಯಮಗಳು, 1979ರ 2 ನೇ ನಿಯಮದ (ಬಿ) ಖಂಡದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಒಂದು ವಲಯದ ಪ್ರಭಾರ ಹೊಂದಿರುವ ಪೊಲೀಸ್ ಇನ್ಸ್‌ಪೆಕ್ಟರನನ್ನು ಸಾರ್ವಜನಿಕ ವಾಹನಗಳ ನಿಯಂತ್ರಕನೆಂದು ಈ ಮೂಲಕ ನೇಮಕ ಮಾಡುತ್ತದೆ ಮತ್ತು ಅವನು ತನ್ನ ಅಧಿಕಾರ ವ್ಯಾಪ್ತಿಯೊಳಗೆ ಅಧಿಕಾರಗಳನ್ನು ಚಲಾಯಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ವಿ.ಎನ್. ಸುಬ್ಬಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ.][1]

1. **ದಿನಾಂಕ 9.8.1979ರ ಕರ್ನಾಟಕ ರಾಜ್ಯಪತ್ರದ ಭಾಗ IV– 2ಸಿ(i) ರಲ್ಲಿ ಪುಟ 377ರಲ್ಲಿ ಪ್ರಕಟವಾಗಿದೆ (ಜಿಎಸ್ಆರ್ 231)**

**[1][ಅಧಿಸೂಚನೆ III. ಸಂಖ್ಯೆ ಎಚ್ ಡಿ 53 ಟಿಎಂಆರ್ 76, ಬೆಂಗಳೂರು, ದಿನಾಂಕ 2 ನೇ ಆಗಸ್ಟ್ 1979**

ಕರ್ನಾಟಕ ಸಂಚಾರ (ಸಾರ್ವಜನಿಕ ವಾಹನಗಳ ನಿಯಂತ್ರಣ) ನಿಯಮಗಳು, 1979ರ 1ನೇ ನಿಯಮದ (3) ನೇ ಉಪನಿಯಮದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1979ರ ಆಗಸ್ಟ್ 15ನೇ ದಿನಾಂಕವನ್ನು ಸದರಿ ನಿಯಮಗಳು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ವಿ.ಎನ್. ಸುಬ್ಬಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ.][1]

1. **ದಿನಾಂಕ 9.8.1979ರ ಕರ್ನಾಟಕ ರಾಜ್ಯಪತ್ರದ ಭಾಗ IV– 2ಸಿ(i) ರಲ್ಲಿ ಪುಟ 377ರಲ್ಲಿ ಪ್ರಕಟವಾಗಿದೆ (ಜಿಎಸ್ಆರ್ 229)**

## ಕರ್ನಾಟಕ ಸಂಚಾರ (ಹೆದ್ದಾರಿಗಳ ಮೇಲಣ ಸಂಚಾರ ನಿಯಂತ್ರಣ) ನಿಯಮಗಳು, 1979

### ವಿಷಯಾನುಕ್ರಮಣಿಕೆ

ನಿಯಮ ಸಂಖ್ಯೆ:



## ಕರ್ನಾಟಕ ಸಂಚಾರ (ಹೆದ್ದಾರಿಗಳ ಮೇಲಣ ಸಂಚಾರ ನಿಯಂತ್ರಣ) ನಿಯಮಗಳು, 1979

### ಅಧಿಸೂಚನೆ–III

### ಸಂ. ಎಚ್‌ಡಿ 53 ಟಿಎಂಆರ್ 76, ಬೆಂಗಳೂರು, ದಿನಾಂಕ 29 ನೇ ಜನವರಿ 1979

**ಜಿ.ಎಸ್.ಆರ್. 70.–** ಕರ್ನಾಟಕ ಸಂಚಾರ ನಿಯಂತ್ರಣ ಅಧಿನಿಯಮ, 1960ರ (1960ರ ಕರ್ನಾಟಕ ಅಧಿನಿಯಮ 18) 14 ನೇ ಪ್ರಕರಣದಿಂದ ಅಗತ್ಯಪಡಿಸಲಾದಂತೆ, ಕರ್ನಾಟಕ ಸಂಚಾರ (ಹೆದ್ದಾರಿಗಳ ಮೇಲಣ ಸಂಚಾರ ನಿಯಂತ್ರಣ) ನಿಯಮಗಳು, 1978ರ ಒಂದು ಕರಡನ್ನು, ಅದರಿಂದಾಗಿ ಬಾಧಿತರಾಗುವ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು 7 ನೇ ಸೆಪ್ಟೆಂಬರ್ 1978ರಂದು ಅಥವಾ ಅದಕ್ಕೂ ಮುಂಚೆ ಆಹ್ವಾನಿಸಿ 1978ರ ಆಗಸ್ಟ್ 3ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ ಭಾಗ IV–2ಸಿ (i) ಪ್ರಕರಣದಲ್ಲಿ ಅಧಿಸೂಚನೆ–III ಸಂ. ಎಚ್ ಡಿ 53 ಟಿಎಂಆರ್ 76, ದಿನಾಂಕ 24 ನೇ ಜುಲೈ 1978 – ಇದರಲ್ಲಿ ಪ್ರಕಟಿಸಿರುವುದರಿಂದ ;

ಮತ್ತು ಸದರಿ ರಾಜ್ಯಪತ್ರವನ್ನು 3 ನೇ ಆಗಸ್ಟ್ 1978ರಂದು ಸಾರ್ವಜನಿಕರಿಗೆ ದೊರೆಯುವಂತೆ ಮಾಡಲಾಗಿರುವುದರಿಂದ;

ಮತ್ತು ಸದರಿ ಕರಡಿನ ಸಂಬಂಧದಲ್ಲಿ ಯಾವುವೇ ಆಕ್ಷೇಪಣೆಗಳು ಅಥವಾ ಸಲಹೆಗಳು ಬಾರದಿರುವುದರಿಂದ;

ಈಗ, ಕರ್ನಾಟಕ ಸಂಚಾರ ನಿಯಂತ್ರಣ ಅಧಿನಿಯಮ, 1960ರ (1960ರ ಕರ್ನಾಟಕ ಅಧಿನಿಯಮ 18) 14 ನೇ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು, ಪ್ರಾರಂಭ ಮತ್ತು ಅನ್ವಯ.–** (1) ಈ ನಿಯಮಗಳನ್ನು ಕರ್ನಾಟಕ ಸಂಚಾರ (ಹೆದ್ದಾರಿಗಳ ಮೇಲಣ ಸಂಚಾರ ನಿಯಂತ್ರಣ) ನಿಯಮಗಳು, 1979 ಎಂದು ಕರೆಯತಕ್ಕದ್ದು.

(2) [1][ಅವು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ [2][ದಿನಾಂಕ][2] ದಂದು ಜಾರಿಗೆ ಬರತಕ್ಕದ್ದು.

(3) ಅವು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗತಕ್ಕದ್ದು.][1]

**15.2.1979ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ ಭಾಗ–IV2(ಸಿ) (i) ರಲ್ಲಿ 135 ರಿಂದ 141 ವರೆಗಿನ ಪುಟಗಳಲ್ಲಿ ಪ್ರಕಟಿಸಲಾಗಿದೆ.**

1. **ಸಂ ಎಚ್‌ಡಿ 53 ಟಿಎಂಆರ್ 76, ದಿನಾಂಕ 1ನೇ ಆಗಸ್ಟ್ 1979ರ ಮೂಲಕ ತಿದ್ದಲಾಗಿದೆ. (ಜಿಎಸ್‌ಆರ್ 224 ಕೊನೆಯ ಪುಟದಲ್ಲಿರುವ ಅಧಿಸೂಚನೆಯ ಪಾಠವನ್ನು ದಯವಿಟ್ಟು ನೋಡಿ)**

2. **ಈ ನಿಯಮಗಳನ್ನು ಅಧಿಸೂಚನೆ IV ಸಂ ಎಚ್‌ಡಿ 53 ಟಿಎಂಆರ್ 76, ದಿನಾಂಕ 2 ನೇ ಆಗಸ್ಟ್ 1979ರ ಪ್ರಕಾರ 15 ನೇ ಆಗಸ್ಟ್ 1979ರಿಂದ ಜಾರಿಗೆ ತರಲಾಗಿದೆ. (ಕೊನೆಯ ಪುಟದಲ್ಲಿರುವ ಅಧಿಸೂಚನೆ ಪಾಠವನ್ನು ದಯವಿಟ್ಟು ನೋಡಿ)**

**2. ಪರಿಭಾಷೆಗಳು.–** ಈ ನಿಯಮಗಳಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಉದ್ದದ ವಿಚ್ಛಿನ್ನ ರೇಖೆ" ಎಂದರೆ, ಹೆದ್ದಾರಿಯ ಅಥವಾ ಅದರ ಭಾಗದ ಉದ್ದಕ್ಕೂ ಅಂಚುಗಟ್ಟಿಗೆ ಸಮಾನಾಂತರವಾಗಿ ಬಣ್ಣ ಬಳಿದಿರುವ ಕನಿಷ್ಠ 10 ಸೆಂಟಿ ಮೀಟರ್‌ಗಳಷ್ಟು ಅಗಲದ ಒಂದು ರೇಖೆ, ರೇಖೆಯ ಪ್ರತಿಯೊಂದು ಭಾಗವು ಒಂದು ಮೀಟರು ಉದ್ದವಾಗಿದ್ದು ಅರ್ಧ ಮೀಟರಿನಷ್ಟು ಖಾಲಿ ಜಾಗ ಬಿಟ್ಟಿರುವಂಥದ್ದು;

(ಬಿ) "ಉದ್ದದ ನಿರಂತರ ರೇಖೆ" ಎಂದರೆ, ಹೆದ್ದಾರಿಯ ಅಥವಾ ಅದರ ಭಾಗದ ಉದ್ದಕ್ಕೂ ಅಂಚುಗಟ್ಟಿಗೆ ಸಮಾನಾಂತರವಾಗಿ ಬಣ್ಣ ಬಳಿದಿರುವಂಥ ಕನಿಷ್ಠ 10 ಸೆಂ.ಮೀ. ಅಗಲದ ಒಂದು ರೇಖೆ;

(ಸಿ) "ಅಡ್ಡವಾದ ನಿರಂತರ ರೇಖೆ" ಎಂದರೆ, ಹೆದ್ದಾರಿಯ ಅಥವಾ ಅದರ ಭಾಗದ ಅಂಚುಗಟ್ಟಿನ ಸಮಕೋನಗಳಲ್ಲಿ ಅಡ್ಡಲಾಗಿ ಬಣ್ಣಬಳಿದಿರುವ ಕನಿಷ್ಠ 10 ಸೆಂ.ಮೀ ಅಗಲದ ಒಂದು ರೇಖೆ;

(ಡಿ) "ಬಾಣ" ಎಂದರೆ ಕನಿಷ್ಠ 10 ಸೆಂ.ಮೀ ಅಗಲವಿರುವ ಮತ್ತು ಅಷ್ಟೇ ಅಗಲದ ಶಿರೋ ಭಾಗವುಳ್ಳ ಒಂದು ಪ್ರಾತಿನಿಧಿಕ ಚಿಹ್ನೆ;

(ಇ) "ಮೇಲ್ಮೈಯಲ್ಲಿ ಗುರುತು ಮಾಡುವುದು" ಎಂದರೆ, ಸ್ಟಡ್ಸ್, ಪ್ರತಿಫಲಕಗಳು ಅಥವಾ ಅಂತಹವೇ ಸಾಧನಗಳನ್ನು ಅಳವಡಿಸಿ ಹೆದ್ದಾರಿಯ ಮೇಲ್ಮೈ ಮೇಲೆ ಬಣ್ಣದಿಂದ ಬರೆದಿರುವ ಒಂದು ರೇಖೆ, ಪದ ಅಥವಾ ಬಾಣದ ಗುರುತು ಅಥವಾ ಇವುಗಳಲ್ಲಿ ಒಂದು ಅಥವಾ ಹೆಚ್ಚಿನವುಗಳ ಸಂಯೋಜನೆ.

**3. ನಿಷೇಧಗಳು.–** (1) ಒಂದು ವಾಹನದ ಯಾರೇ ಚಾಲಕನು, ಉದ್ದದ ನಿರಂತರ ರೇಖೆಯನ್ನು ದಾಟತಕ್ಕದ್ದಲ್ಲ ಅಥವಾ ಅದರ ಆಚೆಗೆ ಹೋಗತಕ್ಕದ್ದಲ್ಲ.

(2) ಒಂದು ವಾಹನದ ಯಾರೇ ಚಾಲಕನು ಹೆದ್ದಾರಿಯಲ್ಲಿ ವಾಹನಗಳ ಮತ್ತು ಪಾದಚಾರಿ ಸಂಚಾರಕ್ಕೆ ಮತ್ತು ಇತರ ಹೆದ್ದಾರಿ ಬಳಕೆದಾರರ ಸುರಕ್ಷತೆಗೆ ಸೂಕ್ತ ಗಮನನೀಡಿ, ಯುಕ್ತ ಜಾಗರೂಕತೆ ಮತ್ತು ಎಚ್ಚರಿಕೆಯನ್ನು ವಹಿಸಿದ ಹೊರತು, ಉದ್ದದ ವಿಚ್ಛಿನ್ನ ರೇಖೆಯನ್ನು ದಾಟತಕ್ಕದ್ದಲ್ಲ ಅಥವಾ ಅದರ ಆಚೆಗೆ ಹೋಗತಕ್ಕದ್ದಲ್ಲ.

(3) ಒಂದು ವಾಹನದ ಯಾರೇ ಚಾಲಕನು ಬಿಳಿ ಬಣ್ಣದಲ್ಲಿ ಬಾಣದ ಗುರುತನ್ನು ಸೂಚಿಸಿರುವಲ್ಲೆಲ್ಲಾ ಅಂಥ ದಿಕ್ಕಿನಲ್ಲಿ ಹೊರತಾಗಿ ಸಾಗಣೆ ದಾರಿಯಲ್ಲಿ ಮುಂದುವರಿಯತಕ್ಕದ್ದಲ್ಲ.

(4) ನೆಲಗಟ್ಟು ಅಥವಾ ಸಾಕಷ್ಟು ಕಾಲುದಾರಿ ಇರುವ ಕಡೆಗಳಲ್ಲಿ ಪಾದಚಾರಿಗಳು ಅದನ್ನು ಉಪಯೋಗಿಸತಕ್ಕದ್ದು ಹಾಗೂ ಸಾಗಣೆ ದಾರಿಯಲ್ಲಿ ನಡೆಯತಕ್ಕದ್ದಲ್ಲ.

(5) ಬಸ್ ಚಲಿಸುತ್ತಿರುವಾಗ ಅಥವಾ ಆ ಸ್ಥಳವು ಅಂಗೀಕೃತ ನಿಲುಗಡೆಯ ಸ್ಥಳವಲ್ಲದಿರುವಾಗ ಜನರು ಬಸ್ಸಿಗೆ ಹತ್ತತಕ್ಕದ್ದಲ್ಲ ಅಥವಾ ಬಸ್ಸಿನಿಂದ ಇಳಿಯತಕ್ಕದ್ದಲ್ಲ. ನಿಂತಿರುವ ಅಥವಾ ನಿಧಾನವಾಗಿ ಚಲಿಸುತ್ತಿರುವ ಬಸ್ಸಿನ ಹಿಂಬದಿಯಿಂದ ಅವರು ಹಠತ್ತನೆ ಹೊರ ಹೋಗತಕ್ಕದ್ದಲ್ಲ. ಅವರು ಫುಟ್ ಬೋರ್ಡಿನ ಮೇಲೆ ನಿಂತು ಪ್ರಯಾಣ ಮಾಡತಕ್ಕದ್ದಲ್ಲ.

(6) ವಾಹನವನ್ನು ಬಳಸುವವರು, ಅವರು ಮುನ್ನುಗ್ಗುವ ಅಥವಾ ಬಲಕ್ಕೆ ತಿರುಗುವ ಉದ್ದೇಶ ಹೊಂದಿದ್ದ ಹೊರತು, ತೀರಾ ಎಡಭಾಗದಲ್ಲಿ ಚಲಿಸತಕ್ಕದ್ದು. ಅವರು ಮಧ್ಯರಸ್ತೆಯಲ್ಲಿ ವಾಹನವನ್ನು ಚಾಲನೆ ಮಾಡತಕ್ಕದ್ದಲ್ಲ.

(7) ಪಾದಚಾರಿಗಳ ದಾಟು ಮಾರ್ಗವನ್ನು ಸಮೀಪಿಸುತ್ತಿರುವಾಗ, ಈ ದಾಟು ಮಾರ್ಗಗಳ ಮೇಲೆ ಪಾದಚಾರಿಗಳು ದಾರಿಯ ಹಕ್ಕು ಹೊಂದಿರುವುದರಿಂದಾಗಿ ಅವರಿಗೆ ದಾರಿ ಮಾಡಿಕೊಡುವಂತೆ ವಾಹನಗಳ ವೇಗವನ್ನು ಕಡಿಮೆ ಮಾಡತಕ್ಕದ್ದು ಅಥವಾ ನಿಲ್ಲಿಸತಕ್ಕದ್ದು. ವಾಹನವನ್ನು ನಿಧಾನಗೊಳಿಸುವ ಅಥವಾ ನಿಲ್ಲಿಸುವ ತಮ್ಮ ಉದ್ದೇಶದ ಬಗ್ಗೆ ಅವರು ಇತರ ಚಾಲಕರಿಗೆ ಸಂಕೇತವನ್ನು ಸಹ ನೀಡತಕ್ಕದ್ದು.

(8) ಪಾದಚಾರಿಗಳ ದಾಟು ಮಾರ್ಗವನ್ನು ಸಮೀಪಿಸುತ್ತಿರುವಾಗ ಮೋಟಾರು ಚಾಲಕರು ಮುನ್ನುಗ್ಗತಕ್ಕದ್ದಲ್ಲ.

(9) ವಾಹನಗಳು, ಗುರುತು ರೇಖೆಗಳ ಒಳಗೆ ಇರತಕ್ಕದ್ದು ಹಾಗೂ ಇನ್ನೊಂದು ರೇಖೆಯೊಳಕ್ಕೆ ಚಲಿಸಬೇಕಾದಾಗ ಮಾತ್ರ ಅವುಗಳನ್ನು ದಾಟಬೇಕು. ಅವರು ರೇಖೆಯಿಂದ ರೇಖೆಗೆ ಮಾರ್ಗ ಬದಲಿಸತಕ್ಕದ್ದಲ್ಲ. ಅವರು ಇನ್ನೊಂದು ರೇಖೆಗೆ ಚಲಿಸಲು ಬಯಸಿದರೆ, ಅವರು ಸೂಕ್ತ ಸಂಕೇತವನ್ನು ನೀಡಿದ ನಂತರ ಮಾತ್ರವೇ ಹಾಗೆ ಚಲಿಸತಕ್ಕದ್ದು ಮತ್ತು ಆ ರೇಖೆಯೊಳಗಿರುವ ಇತರ ವಾಹನಗಳಿಗೆ ಅನಾನುಕೂಲ ಅಥವಾ ಅಪಾಯ ಉಂಟು ಮಾಡತಕ್ಕದ್ದಲ್ಲ.

(10) ಎಲ್ಲ ವಾಹನಗಳು ಬಲಭಾಗದಿಂದ ಮುನ್ನುಗ್ಗತಕ್ಕದ್ದು. ಇದು ಈ ಮುಂದಿನ ಸಂದರ್ಭಗಳಲ್ಲಿ ಅನ್ವಯವಾಗತಕ್ಕದ್ದಲ್ಲ, ಎಂದರೆ:–

(ಎ) ಮುಂದಿರುವ ಚಾಲಕನು ಬಲಕ್ಕೆ ತಿರುಗುವ ತನ್ನ ಉದ್ದೇಶದ ಬಗ್ಗೆ ಸಂಕೇತ ನೀಡಿದಾಗ, ಹಿಂದಿನ ವಾಹನದ ಚಾಲಕನು, ಇತರ ಸಂಚಾರಿಗಳಿಗೆ ಅನಾನುಕೂಲ ಮಾಡದೆ ಅವನ ಎಡಭಾಗದಿಂದ ಮುನ್ನುಗ್ಗಬಹುದು; ಮತ್ತು

(ಬಿ) ನಿಧಾನಗತಿಯ ದಟ್ಟಣೆ ವಾಹನ ಸಂಚಾರದಲ್ಲಿ, ಬಲಭಾಗದಲ್ಲಿ ರೇಖೆಯ ಒಳಗಿರುವ ವಾಹನಗಳು ಮುಂದಿರುವ ವಾಹನಕ್ಕಿಂತಲೂ ನಿಧಾನವಾಗಿ ಚಲಿಸುತ್ತಿರುವಾಗ.

(11) ಈ ಮುಂದಿನ ಸಂದರ್ಭಗಳಲ್ಲಿ ಎಂದರೆ –

(ಎ) ಪಾದಚಾರಿಗಳ ದಾಟು ಮಾರ್ಗ;

(ಬಿ) ಕೂಡು ರಸ್ತೆ ;

(ಸಿ) ಮೂಲೆ ಅಥವಾ ತಿರುವು ;

(ಡಿ) ಬೆಟ್ಟದ ಚಾಚು ; ಮತ್ತು

(ಇ) ನಮ್ – ಬ್ಯಾಕ್ ಸೇತುವೆ

–– ಇವುಗಳು ಸಮೀಪಿಸುವಾಗ ಮುನ್ನುಗ್ಗುವ ಅವಕಾಶ ಇರತಕ್ಕದ್ದಲ್ಲ.

(12) ಈ ಮುಂದಿನ ಸಂದರ್ಭಗಳಲ್ಲಿ , ಎಂದರೆ :–

(ಎ) ರಸ್ತೆಯು ಕಿರಿದಾಗಿದ್ದರೆ;

(ಬಿ) ರಸ್ತೆಯಲ್ಲಿ ಎರಡು ಬಿಳಿ ರೇಖೆಗಳನ್ನು ಗುರುತು ಮಾಡಿದ್ದು ಚಾಲಕನ ಸಮೀಪದಲ್ಲಿರುವ ರೇಖೆಗಳು ನಿರಂತರವಾಗಿದ್ದರೆ ಮತ್ತು ಮುನ್ನುಗ್ಗಬೇಕಾದಲ್ಲಿ ನಿರಂತರ ರೇಖೆಗಳನ್ನು ದಾಟಬೇಕಾಗಿ ಬಂದರೆ; ಮತ್ತು

(ಸಿ) ಮುನ್ನುಗ್ಗಬೇಕಾದಲ್ಲಿ, ಇನ್ನೊಂದು ವಾಹನವು ಹಾದಿ ಬಿಟ್ಟು ಹೊರಳ ಬೇಕಾಗಿ ಬಂದರೆ ಅಥವಾ ವೇಗ ಕಡಿಮೆ ಮಾಡಬೇಕಾಗಿ ಬಂದರೆ

–– ಯಾವುದೇ ರೀತಿಯಲ್ಲಿ ಮುನ್ನುಗ್ಗಲು ಅವಕಾಶವಿರತಕ್ಕದ್ದಲ್ಲ.

(13) ವಾಹನದ ಚಾಲಕನು, ಹಿಂದೆ ಇರುವ ತನಗೆ ಕಾಣಿಸದ ಸ್ಥಳದಲ್ಲಿ ಯಾರೇ ಮಕ್ಕಳು ಅಥವಾ ಇತರ ಪಾದಚಾರಿಗಳು ಅಥವಾ ಅಡಚಣೆಗಳು ಇಲ್ಲವೆಂಬುದನ್ನು ಖಚಿತಪಡಿಸಿಕೊಳ್ಳದ ಹೊರತು ವಾಹನವನ್ನು ಹಿಂಚಲನೆ ಮಾಡತಕ್ಕದ್ದಲ್ಲ.

(14) ವಾಹನಗಳನ್ನು ಒಂದು ಪಕ್ಕದ ರಸ್ತೆಯಿಂದ ಒಂದು ಮುಖ್ಯ ರಸ್ತೆಗೆ ಹಿಂಚಲನೆ ಮಾಡತಕ್ಕದ್ದಲ್ಲ.

(15) ಹಿಂದುಗಡೆಯ ರಸ್ತೆ ಚಾಲಕನಿಗೆ ಸರಿಯಾಗಿ ಕಾಣದಿದ್ದರೆ ಅವನು ಹಿಂಚಲನೆ ಮಾಡುವಾಗ ನೆರವು ತೆಗೆದುಕೊಳ್ಳತಕ್ಕದ್ದು.

(16) ರಾತ್ರಿ ವೇಳೆಗಳಲ್ಲಿ ವಾಹನಗಳನ್ನು ಯಾವಾಗಲೂ ಅವುಗಳ ದೀಪದ ಬೆಳಕಿನ ಪರಿಮಿತಿಗಳೊಳಗೇ ಚಾಲನೆ ಮಾಡತಕ್ಕದ್ದು.

(17) ಚಾಲಕರು ಕಟ್ಟಡಗಳಿರುವ ಪ್ರದೇಶಗಳಲ್ಲಿ ರಾತ್ರಿ ವೇಳೆಯಲ್ಲಿ ಬೀದಿ ದೀಪಗಳ ಬೆಳಕು ಉತ್ತಮವಾಗಿದ್ದ ಹೊರತು ಕಟ್ಟಡಗಳು ತುಂಬಿರುವ ಪ್ರದೇಶದಲ್ಲಿ ಬೆಳಕು ಕುಗ್ಗಿಸದ ದೀಪಗಳನ್ನು ಬಳಸತಕ್ಕದ್ದು.

(18) ದೀಪದ ಬೆಳಕಿಲ್ಲದಿರುವ ರಸ್ತೆಗಳಲ್ಲಿ ಯಾವಾಗಲೂ ಮುಂದಿನ ದೀಪಗಳನ್ನು ಬಳಸತಕ್ಕದ್ದು. ಎದುರು ಬರುವ ವಾಹನಗಳನ್ನು ಮತ್ತು ಸೈಕಲ್ ಸವಾರರನ್ನು ಕಂಡಾಗ, ಮುಂದಿನ ದೀಪಗಳನ್ನು ಮಂದಗೊಳಿಸಬೇಕು. ಚಾಲಕನ ಕಣ್ಣು ಕೋರೈಸಿದರೆ ಅವನು ವಾಹನದ ವೇಗ ತಗ್ಗಿಸತಕ್ಕದ್ದು ಅಥವಾ ನಿಲ್ಲಿಸತಕ್ಕದ್ದು.

(19) ಇನ್ನೊಂದು ವಾಹನದ ಹಿಂದೆ ಚಲಿಸುವಾಗ, ಚಾಲಕನು ತನ್ನ ವಾಹನದ ಮುಂದಿನ ದೀಪಗಳನ್ನು ಮಂದಗೊಳಿಸಬೇಕು .

(20) ಚಾಲಕನು ಈ ಮುಂದಿನ ಸಂದರ್ಭಗಳಲ್ಲಿ, ಎಂದರೆ ,–

(ಎ) ಕೂಡು ರಸ್ತೆ, ತಿರುವು, ಬೆಟ್ಟದ ಚಾಚು ಅಥವಾ ಹಮ್ ಬ್ಯಾಕ್ ಸೇತುವೆಯಲ್ಲಿ ಅಥವಾ ಅದರ ಸಮೀಪದಲ್ಲಿ;

(ಬಿ) ಪಾದಚಾರಿ ಮಾರ್ಗದ ಮೇಲೆ;

(ಸಿ) ಸಂಚಾರ ನಿಯಂತ್ರಣ ದೀಪಗಳ ಅಥವಾ ಪಾದಚಾರಿ ದಾಟು ಮಾರ್ಗದ ಸಮೀಪದಲ್ಲಿ;

(ಡಿ) ಮುಖ್ಯ ರಸ್ತೆಯಲ್ಲಿ ಅಥವಾ ವೇಗ ಸಂಚಾರದ ಮಾರ್ಗದಲ್ಲಿ;

(ಇ) ನಿಂತಿರುವ ಇನ್ನೊಂದು ವಾಹನದ, ರಸ್ತೆ ನಡುವೆ ಪಾದಚಾರಿಗಳಿಗಾಗಿ ನಿರ್ಮಿಸಿದ ಯಾವುದೇ ಎತ್ತರ ಸ್ಥಳದ ಅಥವಾ ಇತರ ಅಡೆತಡೆಗಳ (ಎಂದರೆ ರಸ್ತೆ ರಿಪೇರಿ ನಡೆಯುತ್ತಿರುವ ಸ್ಥಳಗಳ) ಎದುರು ಅಥವಾ ಅದರ ಸರಿಸುಮಾರು ಎದುರಿನಲ್ಲಿ;

(ಎಫ್) ನಿಂತಿರುವ ವಾಹನದ ಪಕ್ಕದಲ್ಲಿ;

(ಜಿ) ಬಸ್ ನಿಲ್ದಾಣ, ಶಾಲೆ ಅಥವಾ ಆಸ್ಪತ್ರೆಯ ಪ್ರವೇಶ ದ್ವಾರದಲ್ಲಿ ಅಥವಾ ಅದರ ಸಮೀಪದಲ್ಲಿ ಅಥವಾ ಅದು ಸಂಚಾರ ಸಂಕೇತಗಳನ್ನು ಮರೆ ಮಾಡುವಂಥ ಸ್ಥಳಗಳಲ್ಲಿ ; ಮತ್ತು

(ಎಚ್) ರಾತ್ರಿ ವೇಳೆಯಲ್ಲಿ ತಪ್ಪು ಭಾಗವಾದ ರಸ್ತೆಯ ಬಲಗಡೆ

– ವಾಹನವನ್ನು ನಿಲ್ಲಿಸತಕ್ಕದ್ದಲ್ಲ.

(21) ವಾಹನದ ಯಾವುದೇ ಬಾಗಿಲನ್ನು ತೆಗೆಯುವ ಮೊದಲು, ಚಾಲಕನು, ಅದರಿಂದ ರಸ್ತೆಯ ಅಥವಾ ಪಾದಚಾರಿ ಮಾರ್ಗದ ಮೇಲಿನ ಯಾವೊಬ್ಬನಿಗೂ ಅಪಾಯವಾಗುವುದಿಲ್ಲ ಅಥವಾ ಅನಾನುಕೂಲವಾಗುವುದಿಲ್ಲ ವೆಂಬುದನ್ನು ನಿಶ್ಚಿತಗೊಳಿಸಿಕೊಳ್ಳತಕ್ಕದ್ದು. ಅವನು ಸಾಧ್ಯವಾದಾಗಲೆಲ್ಲ ರಸ್ತೆಯ ಅಂಚುಗಟ್ಟಿನ ಕಡೆಯಿಂದ ಆಚೆಗೆ ಬರಬೇಕು.

(22) ಚಾಲಕನು ವಾಹನವನ್ನು ನಿಲ್ಲಿಸುವಾಗ ಸಾಧ್ಯವಾದಷ್ಟು ರಸ್ತೆಯ ಅಂಚಿನ ಸಮೀಪಕ್ಕೆ ವಾಹನವನ್ನು ಒಯ್ಯತಕ್ಕದ್ದು.

(23) ಸೈಕಲ್ ಸವಾರರು ಸೈಕಲ್ ಹಾದಿಯನ್ನು ಕಲ್ಪಿಸಿರುವ ಕಡೆಯಲೆಲ್ಲಾ ಅದನ್ನು ಬಳಸತಕ್ಕದ್ದು.

(24) ರಸ್ತೆ ಸಂಚಾರ ಪರಿಸ್ಥಿತಿಗಳು ಅಗತ್ಯಪಡಿಸಿರುವ ಸಂದರ್ಭಗಳಲ್ಲಿ ಸೈಕಲ್ ಸವಾರರು ಒಂಟಿಯಾಗಿ ಸವಾರಿ ಮಾಡತಕ್ಕದ್ದು ಮತ್ತು ಎಂದಿಗೂ ಇಬ್ಬರಿಗಿಂತ ಹೆಚ್ಚು ಜನ ಪಕ್ಕ ಪಕ್ಕದಲ್ಲಿ ಸವಾರಿ ಮಾಡತಕ್ಕದ್ದಲ್ಲ.

(25) ಸೈಕಲ್ ಸವಾರರು, ಅದನ್ನು ಸರಿಯಾಗಿ ನಿಯಂತ್ರಣ ಮಾಡುವುದಕ್ಕೆ ಅಡ್ಡಿಯಾಗಬಹುದಾದಂಥ ಯಾವುದೇ ವಸ್ತುವನ್ನು ಒಯ್ಯತಕ್ಕದ್ದಲ್ಲ.

(26) ಸೈಕಲ್ ಸವಾರನು, ಇನ್ನೊಂದು ವಾಹನವನ್ನು ಅಥವಾ ಇನ್ನೊಂದು ಸೈಕಲನ್ನು ಹಿಡಿದುಕೊಳ್ಳತಕ್ಕದ್ದಲ್ಲ.

(27) ಸೈಕಲ್ ಸವಾರನು, ಚಲಿಸುತ್ತಿರುವ ವಾಹನದ ಹಿಂದೆ ತೀರಾ ಸಮೀಪದಲ್ಲಿ ಸವಾರಿ ಮಾಡತಕ್ಕದ್ದಲ್ಲ.

(28) ನಾಯಿಗಳನ್ನು ವಾಯು ವಿಹಾರಕ್ಕೆ ಕರೆದುಕೊಂಡು ಹೋಗಿರುವಾಗ ಅಥವಾ ಅವು ಕಾರಿನಲ್ಲಿರುವಾಗ, ಅವುಗಳನ್ನು ಬೀದಿಗೆ ಬಿಡತಕ್ಕದ್ದಲ್ಲ, ಆ ಪ್ರಾಣಿಯನ್ನು ಪೂರ್ಣ ಹತೋಟಿಯಲ್ಲಿಟ್ಟಿರತಕ್ಕದ್ದು.

(29) ವಾಹನವನ್ನು ಸಾಗಣೆ ದಾರಿ ರೇಖೆಯೊಳಗೆ ಮಾತ್ರ ಚಾಲನೆ ಮಾಡತಕ್ಕದ್ದು ಮತ್ತು ಒಂದು ಪಥದಿಂದ ಇನ್ನೊಂದಕ್ಕೆ ಬದಲಿಸುವಾಗ ಮಾತ್ರ ಅದನ್ನು ದಾಟತಕ್ಕದ್ದು. ವಿಶೇಷವಾಗಿ ವಾಹನವು ಹೆಚ್ಚು ವೇಗದಲ್ಲಿರುವಾಗ ಪಥವನ್ನು ಬದಲಿಸುವ ಮುನ್ನ ಹಾಗೆ ಬದಲಾಯಿಸುವುದು ಸುರಕ್ಷಿತ ಎಂದು ಖಚಿತಪಡಿಸಿಕೊಳ್ಳತಕ್ಕದ್ದು. ಚಾಲಕರು ಪಥದಿಂದ ಪಥಕ್ಕೆ ಚಲಿಸತಕ್ಕದ್ದಲ್ಲ.

(30) ಎರಡು ಪಥದ ಸಾಗಣೆ ದಾರಿಯಲ್ಲಿ ಮುನ್ನುಗುವಾಗ ಹೊರತು, ವಾಹನವನ್ನು ಎಡಗೈ ಕಡೆ ಇರುವ ಪಥದೊಳಗೆ ಚಾಲನೆ ಮಾಡತಕ್ಕದ್ದು.

(31) ಮೂರು ಪಥದ ಸಾಗಣೆದಾರಿಯ ಮೇಲೆ ವಾಹನವನ್ನು ನಡೆಸುವಾಗ, ಎಡ ಭಾಗದ ಪಥದಲ್ಲಿ ನಿಧಾನವಾಗಿ ಚಲಿಸುವ ವಾಹನಗಳು ಇರುವಾಗ ಮಧ್ಯದ ಪಥದಲ್ಲಿ ಚಲಿಸಬಹುದು. ಬಲ ಭಾಗದ ಪಥವು ಮುನ್ನುಗುವುದಕ್ಕೆ ಮಾತ್ರ ಇದ್ದು, ಚಾಲಕನು, ವಾಹನಗಳು ಮುನ್ನುಗ್ಗಿದ ನಂತರ ಅಲ್ಲಿ ಮಧ್ಯ ಪಥದಲ್ಲಿ ಅವಶ್ಯಕತೆಗಿಂತ ಹೆಚ್ಚು ಹೊತ್ತು ಇರತಕ್ಕದ್ದಲ್ಲ.

4. **ಪಾದಚಾರಿ ದಾಟು ಮಾರ್ಗಗಳು.–** ಪಾದಚಾರಿ ರಸ್ತೆ ದಾಟು ಮಾರ್ಗಗಳನ್ನು ಹೆದ್ದಾರಿಗೆ ಅಡ್ಡಲಾಗಿ ಅಂಚಿನ ಸಮಾನಾಂತರದಲ್ಲಿ ಕನಿಷ್ಠ 30 ಸೆಂ. ಮೀ ನಷ್ಟು ಅಗಲ ಮತ್ತು ಒಂದು ಭಾಗಕ್ಕೂ ಇನ್ನೊಂದಕ್ಕೂ ಕನಿಷ್ಠ 30 ಸೆಂ. ಮೀ ಅಂತರವಿರುವ ಬಿಳಿ ಗೆರೆಗಳನ್ನು ಹಾಕುವ ಮೂಲಕ ಗುರುತು ಮಾಡತಕ್ಕದ್ದು.

5. **ಪಾದಚಾರಿ ದಾಟು ಮಾರ್ಗಗಳ ಸಂಬಂಧದಲ್ಲಿ ನಿಷೇಧಗಳು.–** (1) ವಾಹನದ ಯಾರೇ ಚಾಲಕನು, ವಾಸ್ತವವಾಗಿ ಸಾಗಣೆ ದಾರಿಯನ್ನು ದಾಟುತ್ತಿರುವಂಥ ಪಾದಚಾರಿಗಿಂತ ಮೊದಲು ಅಂಥ ದಾಟು ಮಾರ್ಗದಲ್ಲಿ ಹಾದು ಹೋಗತಕ್ಕದ್ದಲ್ಲ. ಚಾಲಕ ಅಥವಾ ಸವಾರನು ಅಂಥ ದಾಟು ಮಾರ್ಗವನ್ನು ಸಮೀಪಿಸುವುದಕ್ಕೆ ಮುಂಚೆಯೇ ಅಂಥ ಪಾದಚಾರಿಯು ಸಾಗಣೆದಾರಿಯನ್ನು ದಾಟುವವರೆಗೆ ವಾಹನವನ್ನು ನಿಲ್ಲಿಸತಕ್ಕದ್ದು. ಆದರೆ, ಅಂಥ ದಾಟು ಮಾರ್ಗದಲ್ಲಿ ಅಥವಾ ಅದರ ಬಳಿ ಸಂಚಾರ ನಿಯಂತ್ರಿಸುವ ಯಾರೇ ಪೊಲೀಸು ಇರದಿದ್ದಾಗ ಅಥವಾ ಯಾವುದೇ ಸಾಧನ ಯಂತ್ರಗಳನ್ನು ಸ್ಥಾಪಿಸಿರದಿದ್ದಾಗ ಮಾತ್ರ ಅನ್ವಯಿಸುವುದಿಲ್ಲ.

(2) ಯಾರೇ ವಾಹನ ಚಾಲಕನು, ತತ್ಕಾಲದಲ್ಲಿ ಸಂಚಾರವನ್ನು ಪೊಲೀಸರು ನಿಯಂತ್ರಿಸುತ್ತಿರುವಾಗ ಅಥವಾ ಸಂಕೇತ ಸಾಧನವು ನಿಯಂತ್ರಿಸುತ್ತಿರುವಾಗ, ರಸ್ತೆ ಸೇರುವ ಸ್ಥಳಕ್ಕೆ ಬಂದಾಗ, ಅವನು ಮುಂದೆ ಹೋಗಲು ಸಂಕೇತವನ್ನು ಪಡೆಯುವುದಕ್ಕೆ ಮೊದಲು ಸಾಗಣೆ ದಾರಿಯ ಮೇಲಿರುವಂಥ ಪಾದಚಾರಿಯು ಸುರಕ್ಷತವಾಗಿ ರಸ್ತೆ ದಾಟಿ ಅಂಚುಗಟ್ಟಿಗೆ ಬರುವವರೆಗೆ ಮುಂದೆ ಚಲಿಸತಕ್ಕದ್ದಲ್ಲ.

(3) ಯಾವುದೇ ವಾಹನದ ಯಾರೇ ಚಾಲಕನು,–

(ಎ) ತನ್ನ ನಿಯಂತ್ರಣವನ್ನು ಮೀರಿದ ಸಂದರ್ಭಗಳಿಂದ ಅವನು ಮುಂದೆ ಹೋಗಲು ಅಡ್ಡಿಯಾಗಿದ್ದ ಹೊರತು; ಅಥವಾ

(ಬಿ) ಅಪಘಾತವನ್ನು ತಪ್ಪಿಸುವ ಸಲುವಾಗಿ ಅವನು ವಾಹನವನ್ನು ನಿಲ್ಲಿಸುವುದು ಅವಶ್ಯವಾಗಿದ್ದ ಹೊರತು

– ಅಂಥ ವಾಹನವನ್ನು ಅಥವಾ ಅದರ ಯಾವುದೇ ಭಾಗವನ್ನು ಯಾವುದೇ ಪಾದಚಾರಿ ದಾಟು ಮಾರ್ಗದ ಮೇಲೆ ನಿಲ್ಲುವಂತೆ ಮಾಡತಕ್ಕದ್ದಲ್ಲ.

(4) ಯಾರೇ ಪಾದಚಾರಿಯು, ಗುರುತು ಮಾಡಿರುವ ದಾಟು ಮಾರ್ಗಗಳು ಇರುವಲ್ಲಿ ಅವುಗಳ ಮೂಲಕ ಹೊರತು, ಯಾವುದೇ ಹೆದ್ದಾರಿಯನ್ನು ದಾಟತಕ್ಕದ್ದಲ್ಲ. ಆ ದಾಟು ಮಾರ್ಗಗಳಲ್ಲಿ ಪೊಲೀಸರು ನೀಡುವ ಎಲ್ಲ ಸೂಕ್ತ ನಿರ್ದೇಶನಗಳನ್ನು ಪಾದಚಾರಿಗಳು ಪಾಲಿಸತಕ್ಕದ್ದು.

(5) ಯಾರೇ ಪಾದಚಾರಿಯು, ಹೆದ್ದಾರಿಯ ಒಂದು ಕಡೆಯಿಂದ ಇನ್ನೊಂದು ಕಡೆಗೆ ಸೂಕ್ತ ರೀತಿಯಲ್ಲಿ ಹಾದು ಹೋಗುವ ಉದ್ದೇಶಕ್ಕಾಗಿ ಅಗತ್ಯವಿರುವುದಕ್ಕಿಂತ ಹೆಚ್ಚು ಸಮಯ ಯಾವುದೇ ಪಾದಚಾರಿ ದಾಟು ಮಾರ್ಗದಲ್ಲಿ ಉಳಿಯತಕ್ಕದ್ದಲ್ಲ.

(6) ಯಾರೇ ವ್ಯಕ್ತಿಯು, ಪಾದಚಾರಿ ಮಾರ್ಗಗಳು ಇರುವ ಕಡೆ ಹೆದ್ದಾರಿಯ ಸಾಗಣೆ ದಾರಿಯಲ್ಲಿ ನಡೆಯತಕ್ಕದ್ದಲ್ಲ.

6. **ವಾಹನ ನಿಲುಗಡೆ ರೇಖೆ.–** (1) ಕೂಡು ರಸ್ತೆಗೆ ಸೇರುವ ರಸ್ತೆ ಮೇಲ್ಮೈ ಪ್ರದೇಶದ ಮೇಲೆ ಅಥವಾ ರಸ್ತೆಯ ಒಳಗೆ ಅಡ್ಡವಾದ ನಿರಂತರ ರೇಖೆಯನ್ನು ಬಣ್ಣದಲ್ಲಿ ಬಳಿದಿರುವಾಗ ಪೊಲೀಸ್ ಅಧಿಕಾರಿಯು ಅಥವಾ ಸಂಚಾರ ಸಂಕೇತ ಸಾಧನದ ಮೂಲಕ ನಿಲುಗಡೆ ಸಂಕೇತವನ್ನು ನೀಡಿದಾಗ ಯಾವುದೇ ಸಮಯದಲ್ಲಿ ವಾಹನದ ಯಾವುದೇ ಭಾಗವು ಆ ರೇಖೆಯಿಂದ ಹೊರಗೆ ಚಾಚುವ ಹಾಗೆ ಯಾರೇ ವಾಹನ ಚಾಲಕನು ವಾಹನವನ್ನು ಚಾಲನೆ ಮಾಡತಕ್ಕದ್ದಲ್ಲ.

(2) ಯಾರೇ ವಾಹನ ಚಾಲಕನು, ರಸ್ತೆಯು ವಿಭಜನೆಗೊಳ್ಳುವ ಸ್ಥಳದಲ್ಲಿ ಮೇಲ್ಮೈಯಲ್ಲಿ ಗುರುತು ಮಾಡಿದ ' ನಿಲುಗಡೆ ' ಸಂಕೇತವನ್ನು ಸಮೀಪಿಸಿದಾಗ, ಮತ್ತು ತತ್ಕಾಲದಲ್ಲಿ ಸಂಚಾರವನ್ನು ನಿಯಂತ್ರಿಸಲು ಯಾರೇ ಪೊಲೀಸು ಇರದಿದ್ದಲ್ಲಿ ಅಥವಾ ಇತರ ಸಂಕೇತ ನೀಡುವ ಸಾಧನಗಳನ್ನು ಸ್ಥಾಪಿಸದಿರುವಲ್ಲಿ, ಅವನು ಪ್ರವೇಶಿಸ ಬಯಸುವ ರಸ್ತೆಯ ಮೇಲೆ ಸಂಚಾರದ ಪರಿಸ್ಥಿತಿಗಳನ್ನು ತಿಳಿಯಲು ನಿಲ್ಲಿಸದೆ ಎಡಕ್ಕೆ ಅಥವಾ ಬಲಕ್ಕೆ ಮುಂದುವರಿಯತಕ್ಕದ್ದಲ್ಲ ಅಥವಾ ತಿರುಗತಕ್ಕದ್ದಲ್ಲ.

7. **ಸಂಚಾರದ ಪ್ರತ್ಯೇಕೀಕರಣ.–** (1) ಹೆದ್ದಾರಿಯಲ್ಲಿ ಮಂದಗತಿಯ ಸಂಚಾರವನ್ನು, ಉದ್ದವಾಗಿ ನಿರಂತರ ಅಥವಾ ವಿಚ್ಛಿನ್ನ ರೇಖೆಗಳನ್ನು ಬಣ್ಣದಿಂದ ಬರೆಯುವ ಮೂಲಕ ಹೆದ್ದಾರಿಯಲ್ಲಿ ವೇಗದ ಸಂಚಾರದಿಂದ ಪ್ರತ್ಯೇಕಿಸಿರುವಲ್ಲಿ, ಯಾರೇ ಸೈಕಲ್ ಸವಾರ, ರಿಕ್ಷಾ ಚಾಲಕ ಅಥವಾ ಪ್ರಾಣಿಯು ಎಳೆಯುವ ಗಾಡಿಯ ಅಥವಾ ಕೈಗಾಡಿಯ ಚಾಲಕನು, ಪ್ರತ್ಯೇಕಿಸುವ ರೇಖೆಯನ್ನು ದಾಟತಕ್ಕದ್ದಲ್ಲ ಮತ್ತು ರಸ್ತೆಯಲ್ಲಿ ಮೋಟಾರು ವಾಹನಗಳಿಗೆಂದೇ ಇರುವ ಚಾಲನಾ ಮಾರ್ಗದ ಮೇಲೆ ಸವಾರಿ ಮಾಡತಕ್ಕದ್ದಲ್ಲ ಅಥವಾ ಚಾಲನೆ ಮಾಡತಕ್ಕದ್ದಲ್ಲ.

(2) ಮೇಲೆ ನಮೂದಿಸಲಾದಂತೆ ಸಂಚಾರವನ್ನು ಪ್ರತ್ಯೇಕಿಸಿರುವಲ್ಲಿ, ಮೋಟಾರು ವಾಹನದ ಯಾರೇ ಚಾಲಕ ಅಥವಾ ಸವಾರನು, ಪ್ರತ್ಯೇಕಿಸುವ ರೇಖೆಯನ್ನು ದಾಟತಕ್ಕದ್ದಲ್ಲ ಮತ್ತು ವಾಹನ ನಿಲ್ಲಿಸುವ ಅಥವಾ ತಿರುಗಿಸಿಕೊಳ್ಳುವ ಉದ್ದೇಶದ ಹೊರತು, ಮಂದಗತಿಯಲ್ಲಿ ಸಂಚರಿಸುವುದಕ್ಕಾಗಿ ಇರುವ ಪಥದಲ್ಲಿ ಚಲಿಸತಕ್ಕದ್ದಲ್ಲ ಅಥವಾ ಸವಾರಿ ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

**ವಿ.ಎನ್. ಸುಬ್ಬಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ.

[1][ಅಧಿಸೂಚನೆ IV ಸಂಎಚ್‌ಡಿ 53ಟಿಎಂಆರ್ 76, ಬೆಂಗಳೂರು,ದಿನಾಂಕ 2ನೇ ಆಗಸ್ಟ್ 1979

ಕರ್ನಾಟಕ ಸಂಚಾರ (ಹೆದ್ದಾರಿಗಳ ಮೇಲಣ ಸಂಚಾರ ನಿಯಂತ್ರಣ) ನಿಯಮಗಳು, 1979ರ (2) ಮತ್ತು (3) ನೇ ಉಪ ನಿಯಮದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ 1979ರ ಆಗಸ್ಟ್ 15 ನೇ ದಿನಾಂಕವನ್ನು ಸದರಿ ನಿಯಮಗಳು ಜಾರಿಗೆ ಬರತಕ್ಕ ದಿನಾಂಕವೆಂದು ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ವಿ.ಎನ್. ಸುಬ್ಬಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ.][1]

1. **9.8.1979ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ ಭಾಗ–IV 2ಸಿ (i)ರಲ್ಲಿ ಪುಟ 377 ರಲ್ಲಿ ಪ್ರಕಟವಾಗಿದೆ (ಜಿಎಸ್ಆರ್ 230)**

[1][ಅಧಿಸೂಚನೆ ಸಂಎಚ್‌ಡಿ 53 ಟಿಎಂಆರ್ 76, ಬೆಂಗಳೂರು, ದಿನಾಂಕ 1 ನೇ ಆಗಸ್ಟ್ 1979

15 ನೇ ಫೆಬ್ರವರಿ 1979ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ ಭಾಗ IV ಪ್ರಕರಣ 2(ಸಿ)(i) ರಲ್ಲಿ ಅಧಿಸೂಚನೆ ಸಂ III ಜಿಎಸ್ ಆರ್ 70 (ಎಚ್‌ಡಿ 53 ಟಿಎಂಆರ್ 76) ಆಗಿ ಪ್ರಕಟವಾದ ಕರ್ನಾಟಕ ಸಂಚಾರ (ಹೆದ್ದಾರಿಗಳ ಮೇಲಣ ಸಂಚಾರ ನಿಯಂತ್ರಣ) ನಿಯಮಗಳಲ್ಲಿ, ನಿಯಮ 1 ರಲ್ಲಿ,

(1) (2) ನೇ ಉಪ ನಿಯಮದಲ್ಲಿ, " ಅವು ..... ರಂದು ಜಾರಿಗೆ ಬರತಕ್ಕದ್ದು " ಎಂಬುದನ್ನು " ಅವು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು" ಎಂದು ಓದಿಕೊಳ್ಳತಕ್ಕದ್ದು.

(2) (3) ನೇ ಉಪ ನಿಯಮದಲ್ಲಿ " ಅವು ..... ಕ್ಕೆ ಅನ್ವಯವಾಗತಕ್ಕದ್ದು " ಎಂಬುದನ್ನು " ಅವು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗತಕ್ಕದ್ದು " ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ವಿ.ಎನ್. ಸುಬ್ಬಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ.][1]

1. **9.8.1979ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ ಭಾಗ–IV 2ಸಿ (i)ರಲ್ಲಿ ಪುಟ 374 ರಲ್ಲಿ ಪ್ರಕಟವಾಗಿದೆ (ಜಿಎಸ್ಆರ್ 224)**

The above translation of the Karnataka Traffic Control Act, 1960 (18 of 1960), the Karnataka Traffic Control Rules 1979, the Karnataka Traffic (Control of Public Vehicles) Rules, 1979, and the Karnataka Traffic (Regulation of Traffic Highways) Rules, 1979 shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

**GOVERNOR OF KARNATAKA**
ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
ಪಿ.ಆರ್. 1194
**ಜಿ.ಕೆ. ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**ಅಧಿಸೂಚನೆ**

**ಸಂಖ್ಯೆ : ಸಂವ್ಯಶಾಇ 58 ರಾಶಾಪ್ರ 2006, ಬೆಂಗಳೂರು, ದಿನಾಂಕ: 17ನೇ ಜುಲೈ 2006**

ಕರ್ನಾಟಕ (ದಸ್ತಾವೇಜುಗಳ ನೋಂದಣಿ) ಮಾನ್ಯತಾ ಅಧಿನಿಯಮ, 1964 (1964 ರ45)ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

**ಕರ್ನಾಟಕ (ದಸ್ತಾವೇಜುಗಳ ನೋಂದಣಿ) ಮಾನ್ಯತಾ ಅಧಿನಿಯಮ, 1964**

**ಪ್ರಕರಣಗಳ ಅನುಕ್ರಮಣಿಕೆ**

**ಪ್ರಕರಣಗಳು:**



**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

**1964ರ ಅಧಿನಿಯಮ 45:-** ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಬೆಳ್ಳೂರಿನಲ್ಲಿ ಈ ಮುಂದಿನ ಅಧಿಕಾರ ವ್ಯಾಪ್ತಿಯೊಂದಿಗೆ 1961ರ ಆಗಸ್ಟ್ ಒಂದರಿಂದ ಜಾರಿಗೆ ಬರುವಂತೆ ಒಂದು ಹೊಸ ಉಪ ನೋಂದಣಿ ಕಛೇರಿಯನ್ನು ತೆರೆಯಲಾಯಿತು:

(1) ಕುಣಿಗಲ್‌ನ ಉಪ ನೋಂದಣಿ ಕಛೇರಿಯ ಅಧಿಕಾರ ವ್ಯಾಪ್ತಿಯಲ್ಲಿ ಇದ್ದ ಎಡಿಯೂರು ಹೋಬಳಿಯ 63 ಗ್ರಾಮಗಳು;

(2) ತುರುವೇಕೆರೆಯ ಉಪ ನೋಂದಣಿ ಕಛೇರಿಯ ಅಧಿಕಾರ ವ್ಯಾಪ್ತಿಯಲ್ಲಿ ಇದ್ದ ಮಾಯಸಂದ್ರ ಹೋಬಳಿಯ 5 ಗ್ರಾಮಗಳು;

(3) ನಾಗಮಂಗಲ ಉಪ ನೋಂದಣಿ ಕಛೇರಿಯ ಅಧಿಕಾರ ವ್ಯಾಪ್ತಿಯಲ್ಲಿ ಇದ್ದ ನೆಲ್ಲಿಗೆರೆ ಹೋಬಳಿಯ 83 ಗ್ರಾಮಗಳು;

(4) ನಾಗಮಂಗಲ ಉಪ ನೋಂದಣಿ ಕಛೇರಿಯ ಅಧಿಕಾರ ವ್ಯಾಪ್ತಿಯಲ್ಲಿ ಇದ್ದ ಬಿಂಡಿಗನವಿಲೆ ಹೋಬಳಿಯ 75 ಗ್ರಾಮಗಳು.

ಈ ಕಛೇರಿಯನ್ನು ರಚಿಸುವ ಮುನ್ನ, 'ಎಡಿಯೂರು ಹೋಬಳಿಯ ಸಾರ್ವಜನಿಕರು ತಮ್ಮ ಗ್ರಾಮಗಳನ್ನು ಕುಣಿಗಲ್ ಉಪ ನೋಂದಣಿ ಕಛೇರಿಯ ಅಧಿಕಾರ ವ್ಯಾಪ್ತಿಯ ಅಡಿಯಲ್ಲಿಯೇ ಮುಂದುವರಿಸಬೇಕೆಂದು ಮನವಿ ಸಲ್ಲಿಸಿದ್ದರು. ಈ ಮನವಿಯ ಪರಿಶೀಲನೆಯು ಇತ್ಯರ್ಥವಾಗುವವರೆಗೆ, ಎಡಿಯೂರು ಹೋಬಳಿಯ 63 ಗ್ರಾಮಗಳ ಸ್ವತ್ತುಗಳಿಗೆ ಸಂಬಂಧಿಸಿದ ದಸ್ತಾವೇಜುಗಳನ್ನು, ಕುಣಿಗಲ್ ಉಪ ನೋಂದಣಿ ಕಛೇರಿಯಲ್ಲಿ ನೋಂದಾಯಿಸುವಂತೆ ಆದೇಶಿಸಲಾಯಿತು. ಆ ತರುವಾಯ' ಈ 63 ಗ್ರಾಮಗಳನ್ನು ಕುಣಿಗಲ್ ಉಪ ನೋಂದಣಿ ಕಛೇರಿಯ ಅಧಿಕಾರ ವ್ಯಾಪ್ತಿಗೆ ವರ್ಗಾಯಿಸುವಂತೆ ಆದೇಶಿಸಲಾಯಿತು. ಹೀಗೆ, ಎಡಿಯೂರು ಹೋಬಳಿಯ 63 ಗ್ರಾಮಗಳನ್ನು 1961ರ ಆಗಸ್ಟ್ ಒಂದರಿಂದ 1962ರ ಏಪ್ರಿಲ್ ಮೂವತ್ತರವರೆಗೆ ಬೆಳ್ಳೂರು ಉಪ ನೋಂದಣಿ ಅಧಿಕಾರಿಯ ಅಧಿಕಾರ ವ್ಯಾಪ್ತಿಯೊಳಗೆ ಬರುವಂತೆ ಸೇರಿಸಲಾಯಿತು. ಆದರೆ, ಈ ಗ್ರಾಮಗಳಲ್ಲಿದ್ದ ಸ್ವತ್ತುಗಳಿಗೆ ಸಂಬಂಧಿಸಿದ ದಸ್ತಾವೇಜುಗಳನ್ನು, ಸದರಿ ಅವಧಿಯಲ್ಲಿ ಕುಣಿಗಲ್ ಉಪ ನೋಂದಣಿ ಕಛೇರಿಯಲ್ಲಿ ನೋಂದಾಯಿಸಲಾಗಿತ್ತು.

ಸದರಿ ದಸ್ತಾವೇಜುಗಳ ನೋಂದಣಿಯನ್ನು ಮಾನ್ಯಗೊಳಿಸುವುದು ಅವಶ್ಯವಾಗಿದೆ.

ಆದ್ದರಿಂದ ಈ ವಿಧೇಯಕ.

(ದಿನಾಂಕ 1964ರ ಏಪ್ರಿಲ್ 2ರ ಕರ್ನಾಟಕ ರಾಜ್ಯ ಪತ್ರದ (ವಿಶೇಷ ಸಂಚಿಕೆ), ಭಾಗ-IV-ಎ ಯಲ್ಲಿ ಪುಟ 3ರಲ್ಲಿ ಸಂಖ್ಯೆ 70 ಎಂದು ಪ್ರಕಟವಾಗಿದೆ.)

## 1964ರ [1][ಕರ್ನಾಟಕ ಅಧಿನಿಯಮ][1] ಸಂಖ್ಯೆ 45

**1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 01-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

**(1964ರ ಡಿಸೆಂಬರ್ ಹತ್ತರಂದು [1][ಕರ್ನಾಟಕ ರಾಜಪತ್ರ][1] ದಲ್ಲಿ ಮೊದಲು ಪ್ರಕಟವಾಗಿದೆ)**

## [1][ಕರ್ನಾಟಕ][1] (ದಸ್ತಾವೇಜುಗಳ ನೋಂದಣಿ) ಮಾನ್ಯತಾ ಅಧಿನಿಯಮ, 1964

**1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 01-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

**(1964ರ ನವೆಂಬರ್ ಇಪ್ಪತ್ತಾರನೇ ದಿನಾಂಕದಂದು ರಾಷ್ಟ್ರಾಧ್ಯಕ್ಷರ ಅನುಮೋದನೆಯನ್ನು ಪಡೆಯಲಾಗಿದೆ.)**

ಕುಣಿಗಲ್ ಉಪ ನೋಂದಣಿ ಕಛೇರಿಯಲ್ಲಿ ನೋಂದಾಯಿಸಿದ ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನ ಎಡಿಯೂರು ಹೋಬಳಿಯಲ್ಲಿರುವ ಸ್ವತ್ತಿಗೆ ಸಂಬಂಧಿಸಿದ ದಸ್ತಾವೇಜುಗಳನ್ನು ಮಾನ್ಯಗೊಳಿಸಲು ಉಪಬಂದ ಕಲ್ಪಿಸುವ ಒಂದು ಅಧಿನಿಯಮ.

ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನ ಎಡಿಯೂರು ಹೋಬಳಿಯು ಕುಣಿಗಲ್ ಉಪ ಜಿಲ್ಲೆಯ ಅಧಿಕಾರ ವ್ಯಾಪ್ತಿಯಲ್ಲಿ ಇದ್ದುದರಿಂದ;

ಮತ್ತು, ಸದರಿ ಎಡಿಯೂರು ಹೋಬಳಿಯನ್ನು 1961ರ ಆಗಸ್ಟ್ ಒಂದರಿಂದ 1962ರ ಏಪ್ರಿಲ್ 30ರ ವರೆಗೆ ಮಂಡ್ಯ ಜಿಲ್ಲೆಯ ಬೆಳ್ಳೂರು ಉಪ ಜಿಲ್ಲೆಯ ಅಧಿಕಾರ ವ್ಯಾಪ್ತಿಯಲ್ಲಿ ಸೇರಿಸಲಾಗಿದ್ದುದರಿಂದ;

ಮತ್ತು, ಸದರಿ ಎಡಿಯೂರು ಹೋಬಳಿಯಲ್ಲಿರುವ ಸ್ವತ್ತಿಗೆ ಸಂಬಂಧಿಸಿದ ದಸ್ತಾವೇಜುಗಳನ್ನು ಸದರಿ ಅವಧಿಯಲ್ಲಿ ಕುಣಿಗಲ್ ಉಪ ನೋಂದಣಿ ಕಛೇರಿಯಲ್ಲಿ ನೋಂದಾಯಿಸಲಾಗಿದ್ದುದರಿಂದ;

ಮತ್ತು ಸದರಿ ದಸ್ತಾವೇಜುಗಳ ನೋಂದಣಿಯನ್ನು ಮಾನ್ಯಗೊಳಿಸುವುದು ವಿಹಿತವೆಂದು ಭಾವಿಸಲಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಹದಿನೈದನೇ ವರ್ಷದಲ್ಲಿ [1][ಕರ್ನಾಟಕ ರಾಜ್ಯ][1] ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:-

**1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 01-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

**1. ಚಿಕ್ಕ ಹೆಸರು:-** ಈ ಅಧಿನಿಯಮವನ್ನು [1][ಕರ್ನಾಟಕ][1] (ದಸ್ತಾವೇಜುಗಳ ನೋಂದಣಿ) ಮಾನ್ಯತಾ ಅಧಿನಿಯಮ, 1964 ಎಂದು ಕರೆಯತಕ್ಕದ್ದು.

**1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 01-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

**2. ಕುಣಿಗಲ್ ತಾಲ್ಲೂಕಿನ ಎಡಿಯೂರು ಹೋಬಳಿಯಲ್ಲಿರುವ ಸ್ವತ್ತುಗಳಿಗೆ ಸಂಬಂಧಿಸಿದ ಕೆಲವು ದಸ್ತಾವೇಜುಗಳ ನೋಂದಣಿಯನ್ನು ಸಿಂಧುಗೊಳಿಸುವುದು:-** ಭಾರತೀಯ ನೋಂದಣಿ ಅಧಿನಿಯಮ, 1908 (1908ರ ಕೇಂದ್ರ ಅಧಿನಿಯಮ-XIV)ರಲ್ಲಿ ಏನೇ ಒಳಗೊಂಡಿದ್ದರೂ, 1961ರ ಆಗಸ್ಟ್ ಒಂದರಿಂದ ಪ್ರಾರಂಭವಾಗಿ ಮತ್ತು 1962ರ ಏಪ್ರಿಲ್ ಮೂವತ್ತರಂದು ಕೊನೆಗೊಳ್ಳುವ ಅವಧಿಯಲ್ಲಿ, ತುಮಕೂರು ಜಿಲ್ಲೆಯ ಕುಣಿಗಲ್ ಉಪನೋಂದಣಿ ಕಛೇರಿಯಲ್ಲಿ ನೋಂದಾಯಿಸಲಾಗಿದ್ದ, ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನ ಎಡಿಯೂರು ಹೋಬಳಿಯಲ್ಲಿರುವ ಯಾವುದೇ ಸ್ವತ್ತಿಗೆ ಸಂಬಂಧಪಟ್ಟ ದಸ್ತಾವೇಜುಗಳನ್ನು ಆ ಕಛೇರಿಯಲ್ಲಿ ಮಾನ್ಯವಾಗಿ ನೋಂದಾಯಿಸಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಅಂಥ ಯಾವುದೇ ನೋಂದಣಿಯನ್ನು, ಮಂಡ್ಯ ಜಿಲ್ಲೆಯ ಬೆಳ್ಳೂರು ಉಪ ನೋಂದಣಿ ಕಛೇರಿಯಲ್ಲಿ ನೋಂದಾಯಿಸಿಲ್ಲವೆಂಬ ಕಾರಣ ಮಾತ್ರದಿಂದಲೇ ಅದನ್ನು ಪ್ರಶ್ನಿಸತಕ್ಕದ್ದಲ್ಲ.

The above translation of the Karnataka (Registration of Documents) Validation Act, 1964 (Act No. 45 of 1964) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

**GOVERNOR OF KARNATAKA**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ

ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1207

**ಜಿ.ಕೆ. ಬೋರೇಗೌಡ**

ಸರ್ಕಾರದ ಕಾರ್ಯದರ್ಶಿ

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**ಅಧಿಸೂಚನೆ**

**ಸಂಖ್ಯೆ : ಸಂವ್ಯಶಾಇ 54 ರಾಶಾಪ್ರ 2006, ಬೆಂಗಳೂರು, ದಿನಾಂಕ: 17ನೇ ಜುಲೈ 2006**

ಕರ್ನಾಟಕ ಅಸ್ತಿತ್ವದಲ್ಲಿರುವ ಕಾನೂನುಗಳ (ಮೌಲ್ಯಗಳಿಗೆ ಮಾಡಿದ ಉಲ್ಲೇಖಗಳ ಅರ್ಥಾನ್ವಯ) ಅಧಿನಿಯಮ, 1957 (1957 ರ12)ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

**ಕರ್ನಾಟಕ ಅಸ್ತಿತ್ವದಲ್ಲಿರುವ ಕಾನೂನುಗಳ (ಮೌಲ್ಯಗಳಿಗೆ ಮಾಡಿದ ಉಲ್ಲೇಖಗಳ ಅರ್ಥಾನ್ವಯ) ಅಧಿನಿಯಮ, 1957**

**ಪ್ರಕರಣಗಳ ಅನುಕ್ರಮಣಿಕೆ**

**ಪ್ರಕರಣಗಳು:**



**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

**1957ರ ಅಧಿನಿಯಮ 12.-** ಭಾರತ ನಾಣ್ಯ ತಯಾರಿಕೆ ಅಧಿನಿಯಮ, 1906ರ ಅಡಿಯಲ್ಲಿ 1957ರ ಏಪ್ರಿಲ್ 1 ರಿಂದ ಜಾರಿಗೆ ಬರುವಂತೆ ಹೊಸ ನಾಣ್ಯಗಳನ್ನು (ನಯೆ ಪೈಸೆ) ಚಲಾವಣೆಗೆ ತರುವ ದೃಷ್ಟಿಯಿಂದ, ಅಸ್ತಿತ್ವದಲ್ಲಿರುವ ಕಾನೂನುಗಳಲ್ಲಿ ನಯೆ ಪೈಸೆಗೆ ಸಂಬಂಧಿಸಿದಂತೆ ಆಣೆಗಳಿಗೆ, ಪೈಸೆಗೆ ಮತ್ತು ಪೈಗಳಿಗೆ ಮಾಡಿದ ಉಲ್ಲೇಖಗಳಿಗೆ ಅರ್ಥಾನ್ವಯ ಮಾಡಲು ಉಪಬಂಧ ಕಲ್ಪಿಸುವುದು ಅಗತ್ಯವಾಗಿದೆ.

ಆದ್ದರಿಂದ ಈ ವಿಧೇಯಕ.

(ಅಧಿಸೂಚನೆ ಸಂಖ್ಯೆ: 20728 ಎಲ್.ಎ. ದಿನಾಂಕ: 18ನೇ ಮಾರ್ಚ್ 1957 ನೋಡಿ. ಕಡತ ಸಂಖ್ಯೆ ಎಲ್.ಎ.ಡಬ್ಲ್ಯೂ 47 ಎಲ್.ಜಿ.ಎನ್. 57)

**1957ರ [1][ಕರ್ನಾಟಕ][1] ಅಧಿನಿಯಮ ಸಂಖ್ಯೆ 12**

1957ರ ಏಪ್ರಿಲ್ ಒಂದನೇ ದಿನದಂದು [1][ಕರ್ನಾಟಕ ರಾಜ್ಯಪತ್ರ][1] ದಲ್ಲಿ ಮೊದಲು ಪ್ರಕಟಗೊಂಡಿದೆ.

**[1][ಕರ್ನಾಟಕ][1] ಅಸ್ತಿತ್ವದಲ್ಲಿರುವ ಕಾನೂನುಗಳ (ಮೌಲ್ಯಗಳಿಗೆ ಮಾಡಿದ ಉಲ್ಲೇಖಗಳ ಅರ್ಥಾನ್ವಯ) ಅಧಿನಿಯಮ, 1957**

(1957ರ ಮಾರ್ಚ್ ಮೂವತ್ತೊಂದನೇ ದಿನದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ.)

**ಹೊಸ ನಾಣ್ಯಗಳಿಗೆ (ನಯೆಪೈಸೆ) ಸಂಬಂಧಿಸಿದಂತೆ ಆಣೆಗಳು, ಪೈಸೆಗಳು ಮತ್ತು ಪೈಗಳಲ್ಲಿ ವ್ಯಕ್ತಪಡಿಸಿದ ಮೌಲ್ಯಗಳಿಗೆ ಅಸ್ತಿತ್ವದಲ್ಲಿರುವ ಕಾನೂನುಗಳಲ್ಲಿ ಮಾಡಿದ ಉಲ್ಲೇಖಗಳ ಅರ್ಥಾನ್ವಯಕ್ಕಾಗಿ ಉಪಬಂಧ ಕಲ್ಪಿಸುವ ಒಂದು ಅಧಿನಿಯಮ.**

ಹೊಸ ನಾಣ್ಯಗಳಿಗೆ (ನಯೆಪೈಸೆ) ಸಂಬಂಧಿಸಿದಂತೆ ಆಣೆಗಳು, ಪೈಸೆ ಮತ್ತು ಪೈಗಳಲ್ಲಿ ವ್ಯಕ್ತಪಡಿಸಿದ ಮೌಲ್ಯಗಳಿಗೆ ಅಸ್ತಿತ್ವದಲ್ಲಿರುವ ಕಾನೂನುಗಳಲ್ಲಿ ಮಾಡಿದ ಉಲ್ಲೇಖಗಳ ಅರ್ಥಾನ್ವಯಕ್ಕಾಗಿ ಉಪಬಂಧ ಕಲ್ಪಿಸುವುದು ವಿಹಿತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಎಂಟನೇ ವರ್ಷದಲ್ಲಿ [1][ಕರ್ನಾಟಕ ರಾಜ್ಯ][1] ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:-

**1. ಚಿಕ್ಕ ಹೆಸರು ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು, [1][ಕರ್ನಾಟಕ][1] ಅಸ್ತಿತ್ವದಲ್ಲಿರುವ ಕಾನೂನುಗಳ (ಮೌಲ್ಯಗಳಿಗೆ ಮಾಡಿದ ಉಲ್ಲೇಖಗಳ ಅರ್ಥಾನ್ವಯ) ಅಧಿನಿಯಮ, 1957 ಎಂದು ಕರೆಯತಕ್ಕದ್ದು.

(2) ಇದು, 1957ರ ಏಪ್ರಿಲ್ ಒಂದನೇ ದಿನದಿಂದ ಜಾರಿಗೆ ಬರತಕ್ಕದ್ದು.

**2. ಅರ್ಥ ವಿವರಣೆ.-** ಈ ಅಧಿನಿಯಮದಲ್ಲಿ "ಅಸ್ತಿತ್ವದಲ್ಲಿರುವ ಕಾನೂನು" ಎಂದರೆ ಯಾವ ವಿಷಯಕ್ಕೆ ಸಂಬಂಧಿಸಿದಂತೆ [1][ಕರ್ನಾಟಕ ರಾಜ್ಯ][1] ವಿಧಾನ ಮಂಡಲವು ಕಾನೂನುಗಳನ್ನು ಮಾಡಲು ಅಧಿಕಾರವನ್ನು ಹೊಂದಿದೆಯೋ ಆ ಯಾವುದೇ ವಿಷಯಕ್ಕೆ ಸಂಬಂಧ ಪಟ್ಟಂತೆ ಇಡೀ ಕರ್ನಾಟಕ ರಾಜ್ಯದಲ್ಲಿನ ಅಥವಾ ಅದರ ಯಾವುದೇ ಭಾಗದಲ್ಲಿನ ಯಾವುದೇ ಅಧಿನಿಯಮ, ಅಧ್ಯಾದೇಶ ಅಥವಾ ಕಾನೂನಿನ ಬಲವನ್ನು ಹೊಂದಿರುವ ಯಾವುದೇ ವಿನಿಯಮ ಅಥವಾ ಭಾರತ ನಾಣ್ಯ ಪದ್ಧತಿ ಅಧಿನಿಯಮ, 1906ರ (1906ರ ಕೇಂದ್ರ ಅಧಿನಿಯಮ-III) 14ನೇ ಪ್ರಕರಣದ (3)ನೇ ಉಪಪ್ರಕರಣದ ಉಪಬಂಧಗಳು ಅನ್ವಯವಾಗಬಹುದಾದಂಥ ಯಾವುದೇ ಅಧಿನಿಯಮಿತಿ, ಅಧಿಸೂಚನೆ, ನಿಯಮ ಅಥವಾ ಆದೇಶವನ್ನು ಹೊರತುಪಡಿಸಿ, ಅದರ ಅಡಿಯಲ್ಲಿ ಹೊರಡಿಸಿದ ಅಥವಾ ರಚಿಸಿದ ಯಾವುದೇ ಅಧಿಸೂಚನೆ, ನಿಯಮ, ಆದೇಶ, ಉಪವಿಧಿ, ಯೋಜನೆ ಅಥವಾ ಇತರ ಲಿಖಿತ.

**3. ಅಸ್ತಿತ್ವದಲ್ಲಿರುವ ಕಾನೂನುಗಳಲ್ಲಿನ ಕೆಲವು ಮೌಲ್ಯಗಳಿಗೆ ಮಾಡಿದ ಉಲ್ಲೇಖಗಳ ಅರ್ಥಾನ್ವಯ:-** ಅಸ್ತಿತ್ವದಲ್ಲಿರುವ ಪ್ರತಿಯೊಂದು ಕಾನೂನಿನಲ್ಲಿ ಆಣೆಗಳು, ಪೈಸೆ ಮತ್ತು ಪೈಗಳಲ್ಲಿ ವ್ಯಕ್ತಪಡಿಸಿದ ಯಾವುದೇ ಮೌಲ್ಯಕ್ಕೆ ಮಾಡಿದ ಎಲ್ಲ ಉಲ್ಲೇಖಗಳನ್ನು, ಭಾರತ ನಾಣ್ಯ ತಯಾರಿಕೆ ಅಧಿನಿಯಮ, 1906ರ (1906ರ ಕೇಂದ್ರ ಅಧಿನಿಯಮ-III) 14ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ದರದಲ್ಲಿ ಪರಿವರ್ತಿಸಿ, ಸದರಿ ಅಧಿನಿಯಮದ 14ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಹೊಸ ನಾಣ್ಯಗಳಲ್ಲಿ ವ್ಯಕ್ತಪಡಿಸಿದ ಮೌಲ್ಯಕ್ಕೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು.

**1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 01.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

The above translation of the Karnataka Existing Laws (Construction of Reference to Values) Act, 1957 (Act No. 12 of 1957) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

**GOVERNOR OF KARNATAKA**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1191

**ಜಿ.ಕೆ. ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**ಅಧಿಸೂಚನೆ**

**ಸಂಖ್ಯೆ : ಸಂವ್ಯಶಾಇ 55 ರಾಶಾಪ್ರ 2006, ಬೆಂಗಳೂರು, ದಿನಾಂಕ: 17ನೇ ಜುಲೈ 2006**

ಕರ್ನಾಟಕ ಸಾದಿಲ್ವಾರು ನಿಧಿ ಅಧಿನಿಯಮ, 1957 (1957 ರ11) ಮತ್ತು ಕರ್ನಾಟಕ ಸಾದಿಲ್ವಾರು ನಿಧಿ ನಿಯಮಗಳು 1957ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

**ಕರ್ನಾಟಕ ಸಾದಿಲ್ವಾರು ನಿಧಿ ಅಧಿನಿಯಮ, 1957**

**ಪ್ರಕರಣಗಳ ಅನುಕ್ರಮಣಿಕೆ**

**ಪ್ರಕರಣಗಳು:**



**ಉದ್ದೇಶ ಮತ್ತು ಕಾರಣಗಳ ಹೇಳಿಕೆ**

**I**

**1957ರ ಅಧಿನಿಯಮ 11:-** 1950ರ ಮೈಸೂರು ಅಧಿನಿಯಮ XXI ಇದು ಹಿಂದಿನ ಮೈಸೂರು ರಾಜ್ಯದ ಸಲುವಾಗಿ 30 ಲಕ್ಷ ರೂಪಾಯಿ ಮೊತ್ತವನ್ನು ಒಳಗೊಂಡ ಸಾದಿಲ್ವಾರು ನಿಧಿಯ ಸ್ಥಾಪನೆಗೆ ಉಪಬಂಧ ಕಲ್ಪಿಸಿತ್ತು. ಹೊಸ ಮೈಸೂರು ರಾಜ್ಯವು ರಚನೆಯಾದ ಕಾರಣ, ಒಂದು ಕೋಟಿ ರೂಪಾಯಿ ಮೊತ್ತದ ಒಂದು ಹೊಸ ಸಾದಿಲ್ವಾರು ನಿಧಿಯನ್ನು ಸ್ಥಾಪಿಸುವುದು ಅವಶ್ಯವಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ದಿನಾಂಕ 16ನೇ ಮಾರ್ಚ್, 1957, ಭಾಗ IV- 2ಎ. ಸಂಖ್ಯೆ 60. ಪುಟ 2ರಲ್ಲಿ ಪ್ರಕಟಿಸಲಾಗಿದೆ.)

**II**

**1958ರ ತಿದ್ದುಪಡಿ ಮಾಡುವ ಅಧಿನಿಯಮ 3:-** ಲಭ್ಯವಿಲ್ಲ.

**III**

**1961ರ ತಿದ್ದುಪಡಿ ಮಾಡುವ ಅಧಿನಿಯಮ 15:-** ಲಭ್ಯವಿಲ್ಲ.

**IV**

**1965ರ ತಿದ್ದುಪಡಿ ಮಾಡುವ ಅಧಿನಿಯಮ 20:-** ಮೈಸೂರು ಸಾದಿಲ್ವಾರು ನಿಧಿ ಅಧಿನಿಯಮ, 1957ರ 2ನೇ ಪ್ರಕರಣದ ಅನುಸಾರ, ಎರಡು ಕೋಟಿ ರೂಪಾಯಿ ಮೊತ್ತವನ್ನು ರಾಜ್ಯದ ಸಂಚಿತ ನಿಧಿಯಿಂದ ಸಾದಿಲ್ವಾರು ನಿಧಿಗೆ ಸಂದಾಯ ಮಾಡಬಹುದಾಗಿದೆ. ಈ ಮೊತ್ತವು ಆಹಾರ ಕಾರ್ಯಾಚರಣೆಗಳಿಗೆ ಅಥವಾ ವಿಧಾನ ಮಂಡಲವು ಬಜೆಟ್‌ನ್ನು ಅಂಗೀಕರಿಸಿದ ತರುವಾಯ ಭಾರತ ಸರ್ಕಾರದಿಂದ ಹೆಚ್ಚುವರಿ ನೆರವು ಮಂಜೂರಾಗುವ ಯೋಜನೆಗಳಿಗೆ ಅಥವಾ ಇತರ ಅನಿವಾರ್ಯ ಸಂದರ್ಭಗಳಿಗೆ ತುರ್ತು ಸಂದಾಯಗಳನ್ನು ಮಾಡಲು ಸಾಕಾಗುವುದಿಲ್ಲವೆಂದು ಕಂಡುಬಂದಿರುವುದರಿಂದ, ಸಾದಿಲ್ವಾರು ನಿಧಿಗೆ ಸಂದಾಯ ಮಾಡಬೇಕಾದ ಮೊತ್ತವನ್ನು ಎರಡು ಕೋಟಿ ರೂಪಾಯಿಯಿಂದ ನಾಲ್ಕು ಕೋಟಿ ರೂಪಾಯಿಗೆ ಹೆಚ್ಚಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ. ಇತರ ನೆರೆರಾಜ್ಯಗಳಲ್ಲಿ ಮೂಲ ಸಾದಿಲ್ವಾರು ನಿಧಿಯನ್ನು ಈ ಕೆಳಕಂಡಂತೆ ನಿಗದಿಪಡಿಸಲಾಗಿದೆ,-

ಮಹಾರಾಷ್ಟ್ರ ............ ಏಳುಕೋಟಿ ರೂ.
ಮದರಾಸು ............ ಐದು ಕೋಟಿ ರೂ.
ಆಂಧ್ರ ಪ್ರದೇಶ ............ ಐದು ಕೋಟಿ ರೂ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ದಿನಾಂಕ 11ನೇ ಅಕ್ಟೋಬರ್, 1995, ಭಾಗ IV, 2ಎ. ಸಂಖ್ಯೆ 189, ಪುಟ 2ರಲ್ಲಿ ಪ್ರಕಟಿಸಲಾಗಿದೆ.)

V

**1973ರ ತಿದ್ದುಪಡಿ ಮಾಡುವ ಅಧಿನಿಯಮ 1:-** ಮೈಸೂರು ಸಾದಿಲ್ವಾರು ನಿಧಿ ಅಧಿನಿಯಮ, 1957ರ 2ನೇ ಪ್ರಕರಣದ ಅನುಸಾರ, ನಾಲ್ಕು ಕೋಟಿ ರೂಪಾಯಿ ಮೊತ್ತವನ್ನು ರಾಜ್ಯ ಸಂಚಿತ ನಿಧಿಯಿಂದ ಸಾದಿಲ್ವಾರು ನಿಧಿಗೆ ಸಂದಾಯ ಮಾಡಬಹುದಾಗಿದೆ. ರಾಜ್ಯದ ಹಲವು ಭಾಗಗಳಲ್ಲಿ ರಾಜ್ಯ ಸರ್ಕಾರವು ಕೈಗೊಳ್ಳುವ ಅಭಾವ ಪರಿಹಾರ ಕಾರ್ಯಾಚರಣೆಗೆ ತುರ್ತುಸಂದಾಯಗಳನ್ನು ಮಾಡಲು ಈ ಮೊತ್ತವು ಸಾಕಾಗುವುದಿಲ್ಲವೆಂದು ಕಂಡುಬಂದಿದೆ. ಆದ್ದರಿಂದ ಸಾದಿಲ್ವಾರು ನಿಧಿಯ ಮೂಲ ಹಣವನ್ನು ಮೈಸೂರು ಸಾದಿಲ್ವಾರು ನಿಧಿ (ತಾತ್ಕಾಲಿಕ) (ತಿದ್ದುಪಡಿ) ಅಧ್ಯಾದೇಶ, 1972ರ ಉದ್ಘೋಷಣೆಯ ಮೂಲಕ ಹತ್ತು ಕೋಟಿ ರೂಪಾಯಿಗೆ ತಾತ್ಕಾಲಿಕವಾಗಿ ಹೆಚ್ಚಿಸಲಾಗಿತ್ತು. ಈಗ, ಸಾದಿಲ್ವಾರು ನಿಧಿಗೆ ಸಂದಾಯ ಮಾಡಬೇಕಾದ ಮೊತ್ತವನ್ನು ನಾಲ್ಕುಕೋಟಿ ರೂಪಾಯಿಯಿಂದ ಶಾಶ್ವತ ಕ್ರಮವಾಗಿ ಹತ್ತುಕೋಟಿ ರೂಪಾಯಿಗೆ ಹೆಚ್ಚಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ. ಈ ಮುಂದಿನ ರಾಜ್ಯಗಳಲ್ಲಿ ಸಾದಿಲ್ವಾರು ನಿಧಿಯ ಮೂಲಧನವನ್ನು ಈ ಕೆಳಕಂಡಂತೆ ನಿಗದಿಪಡಿಸಲಾಗಿದೆ,-

ತಮಿಳುನಾಡು ........ ಹತ್ತುಕೋಟಿ ರೂ.

ಗುಜರಾತ್ ........ ಇಪ್ಪತ್ತು ಕೋಟಿ ರೂ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ), ದಿನಾಂಕ 12ನೇ ಡಿಸೆಂಬರ್, 1972, ಭಾಗ IV-2ಎ, ಸಂಖ್ಯೆ 597, ಪುಟ 3ರಲ್ಲಿ ಪ್ರಕಟಿಸಲಾಗಿದೆ.)

VI

**1976ರ ತಿದ್ದುಪಡಿ ಮಾಡುವ ಅಧಿನಿಯಮ 62:-** ಭಾರತ ಸಂವಿಧಾನದ 267 (2)ನೇ ಅನುಚ್ಛೇದವು ರಾಜ್ಯದ ಸಲುವಾಗಿ ಸಾದಿಲ್ವಾರು ನಿಧಿಯನ್ನು ಸ್ಥಾಪಿಸಲು ಉಪಬಂಧ ಕಲ್ಪಿಸುತ್ತದೆ. 1957ರ ಕರ್ನಾಟಕ ಸಾದಿಲ್ವಾರು ನಿಧಿ ಅಧಿನಿಯಮದ 2ನೇ ಪ್ರಕರಣದ ಅನುಸಾರ, ಹತ್ತುಕೋಟಿ ರೂಪಾಯಿಯನ್ನು ರಾಜ್ಯ ಸಂಚಿತ ನಿಧಿಯಿಂದ ಸಾದಿಲ್ವಾರು ನಿಧಿಗೆ ಸಂದಾಯ ಮಾಡಬಹುದಾಗಿದೆ. ಈ ಮೊತ್ತವು ಅಭಾವ ಪರಿಹಾರ ಕಾರ್ಯಕ್ರಮಗಳು ಮತ್ತು ಇತರ ಅಭಿವೃದ್ಧಿ ಚಟುವಟಿಕೆಗಳಿಗೆ ತುರ್ತು ಸಂದಾಯಗಳನ್ನು ಮಾಡಲು ಸಾಕಾಗುವುದಿಲ್ಲವೆಂದು ಕಂಡುಬಂದಿದೆ. ಸಾದಿಲ್ವಾರು ನಿಧಿಯ ಮೂಲ ಧನವನ್ನು ಕರ್ನಾಟಕ ಸಾದಿಲ್ವಾರು ನಿಧಿ (ತಾತ್ಕಾಲಿಕ) (ತಿದ್ದುಪಡಿ) ಅಧ್ಯಾದೇಶದ ಉದ್ಘೋಷಣೆಯ ಮೂಲಕ ಇಪ್ಪತ್ತು ಕೋಟಿ ರೂ.ಗಳಿಗೆ ತಾತ್ಕಾಲಿಕವಾಗಿ ಹೆಚ್ಚಿಸಲಾಗಿತ್ತು. ಈಗ, ಸಾದಿಲ್ವಾರು ನಿಧಿಗೆ ಸಂದಾಯ ಮಾಡತಕ್ಕ ಮೊತ್ತವನ್ನು ಶಾಶ್ವತ ಕ್ರಮವಾಗಿ ಹತ್ತು ಕೋಟಿ ರೂಪಾಯಿಯಿಂದ ಇಪ್ಪತ್ತು ಕೋಟಿ ರೂಪಾಯಿಗೆ ಹೆಚ್ಚಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(1976ರ ಎಲ್.ಎ.ವಿಧೇಯಕ ಸಂಖ್ಯೆ 58, ಕಡತ ಸಂಖ್ಯೆ ಲಾ 97 ಎಲ್‌ಜಿಎನ್ 76 ರಿಂದ ಪಡೆಯಲಾಗಿದೆ.)

VII

**1981ರ ತಿದ್ದುಪಡಿ ಮಾಡುವ ಅಧಿನಿಯಮ 2:-** ವಿಧಾನ ಮಂಡಲದ ಮಂಜೂರಾತಿಯ ನಿರೀಕ್ಷೆಯಲ್ಲಿ ತುರ್ತು ಸಂದಾಯಗಳನ್ನು ಭರಿಸಲು ಸಾದಿಲ್ವಾರು ನಿಧಿಯ ಮೂಲಧನವನ್ನು 20 ಕೋಟಿ ರೂಪಾಯಿಯಿಂದ 35 ಕೋಟಿ ರೂಪಾಯಿಗೆ ಹೆಚ್ಚಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜಪತ್ರದ (ವಿಶೇಷ ಸಂಚಿಕೆ), ದಿನಾಂಕ 6ನೇ ಫೆಬ್ರವರಿ, 1981, ಭಾಗ IV-2ಎ, ಸಂಖ್ಯೆ 112. ಪುಟ.3ರಲ್ಲಿ ಪ್ರಕಟಿಸಲಾಗಿದೆ.)

VIII

**1984ರ ತಿದ್ದುಪಡಿ ಮಾಡುವ ಅಧಿನಿಯಮ 21:-** ಸಾದಿಲ್ವಾರು ನಿಧಿಯ ಮೂಲಧನವನ್ನು ವಿಧಾನ ಮಂಡಲದ ಮಂಜೂರಾತಿಯ ನಿರೀಕ್ಷೆಯಲ್ಲಿ "ಹೊಸ ಸೇವೆಯ" ಮೇಲಿನ ತುರ್ತು ಸಂದಾಯಗಳನ್ನು ಭರಿಸಲು 35 ಕೋಟಿ ರೂಪಾಯಿಯಿಂದ 60 ಕೋಟಿ ರೂಪಾಯಿಗೆ ಹೆಚ್ಚಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ), ದಿನಾಂಕ 22ನೇ ಫೆಬ್ರವರಿ, 1984, ಭಾಗ IV-2ಎ, ಸಂಖ್ಯೆ 135, ಪುಟ 3ರಲ್ಲಿ ಪ್ರಕಟಿಸಲಾಗಿದೆ.)

IX

**1985ರ ತಿದ್ದುಪಡಿ ಮಾಡುವ ಅಧಿನಿಯಮ 31:-**ಸಾದಿಲ್ವಾರು ನಿಧಿಯ ಮೂಲಧನವನ್ನು ವಿಧಾನ ಮಂಡಲದ ಮಂಜೂರಾತಿಯ ನಿರೀಕ್ಷೆಯಲ್ಲಿ ತುರ್ತು ಸಂದಾಯಗಳನ್ನು ಭರಿಸಲು 60 ಕೋಟಿ ರೂಪಾಯಿಯಿಂದ 80 ಕೋಟಿ ರೂಪಾಯಿಗೆ ಹೆಚ್ಚಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ), ದಿನಾಂಕ 7ನೇ ಆಗಸ್ಟ್ 1985, ಭಾಗ IV-2ಎ, ಸಂಖ್ಯೆ 429. ಪುಟ 3ರಲ್ಲಿ ಪ್ರಕಟಿಸಲಾಗಿದೆ.)

## 1957ರ [1][ಕರ್ನಾಟಕ][1] ಅಧಿನಿಯಮ ಸಂಖ್ಯೆ 11

**1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

(1957ರ ಏಪ್ರಿಲ್ ಒಂದನೇ ದಿನದಂದು [1][ಕರ್ನಾಟಕ ರಾಜ್ಯಪತ್ರ][1] ದಲ್ಲಿ ಮೊದಲು ಪ್ರಕಟವಾಗಿದೆ)

## [1][ಕರ್ನಾಟಕ][1] ಸಾದಿಲ್ವಾರು ನಿಧಿ ಅಧಿನಿಯಮ, 1957

**1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

(1957ರ ಮಾರ್ಚ್ ಮೂವತ್ತೊಂದನೇ ದಿನದಂದು ರಾಜ್ಯಪಾಲರ ಅನುಮತಿ ಪಡೆದಿದೆ.)

(1958ರ 3, 1961ರ 15, 1965ರ 20, 1973ರ 1, 1976ರ 62, 1981ರ 2, 1984ರ 21 ಮತ್ತು 1985ರ 31- ಈ ಅಧಿನಿಯಮಗಳ ಮೂಲಕ ತಿದ್ದುಪಡಿಯಾಗಿದೆ).

**[1][ಕರ್ನಾಟಕ ರಾಜ್ಯ] [1] ಕ್ಕಾಗಿ ಸಾದಿಲ್ವಾರು ನಿಧಿಯನ್ನು ಸ್ಥಾಪಿಸುವುದಕ್ಕೆ ಉಪಬಂಧ ಕಲ್ಪಿಸುವ ಅಧಿನಿಯಮ.**

**1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

ಭಾರತ ಸಂವಿಧಾನದ 267ನೇ ಅನುಚ್ಛೇದದ (2)ನೇ ಖಂಡದಲ್ಲಿ ಒಂದು ರಾಜ್ಯದ ವಿಧಾನ ಮಂಡಲವು ಕಾನೂನಿನ ಮೂಲಕ ಕೈಹಣದ ಸ್ವರೂಪದಲ್ಲಿ ಸಾದಿಲ್ವಾರು ನಿಧಿಯನ್ನು ಸ್ಥಾಪಿಸಬಹುದೆಂದು ಉಪಬಂಧ ಕಲ್ಪಿಸಲಾಗಿರುವುದರಿಂದ;

ಮತ್ತು [1][ಕರ್ನಾಟಕ ರಾಜ್ಯ][1] ಕ್ಕೆ ಅಂಥ ಒಂದು ಸಾದಿಲ್ವಾರು ನಿಧಿಯನ್ನು ಸ್ಥಾಪಿಸುವುದು ಯುಕ್ತವಾಗಿರುವುದರಿಂದ;

**1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

ಇದು ಭಾರತ ಗಣರಾಜ್ಯದ ಎಂಟನೇ ವರ್ಷದಲ್ಲಿ [1][ಕರ್ನಾಟಕ ರಾಜ್ಯ ವಿಧಾನ ಮಂಡಲ][1] ದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:-

**1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

**1. ಚಿಕ್ಕ ಹೆಸರು:-** ಈ ಅಧಿನಿಯಮವನ್ನು [1][ಕರ್ನಾಟಕ][1] ಸಾದಿಲ್ವಾರು ನಿಧಿ ಅಧಿನಿಯಮ, 1957 ಎಂದು ಕರೆಯತಕ್ಕದ್ದು.

**1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

2. **ಸಾದಿಲ್ವಾರು ನಿಧಿಯ ಸ್ಥಾಪನೆ:-** [1][ಕರ್ನಾಟಕ ರಾಜ್ಯ][1] ಕ್ಕಾಗಿ [1][ಕರ್ನಾಟಕ ರಾಜ್ಯ][1] ದ ಸಾದಿಲ್ವಾರು ನಿಧಿ ಎಂದು ಕರೆಯಲಾಗುವ ಕೈಹಣದ ಸ್ವರೂಪದ ಸಾದಿಲ್ವಾರು ನಿಧಿಯನ್ನು ಸ್ಥಾಪಿಸತಕ್ಕದ್ದು ಮತ್ತು ಅದಕ್ಕೆ ರಾಜ್ಯದ ಸಂಚಿತ ನಿಧಿಯಿಂದ [2][ಎಂಬತ್ತು ಕೋಟಿ ರೂಪಾಯಿ][2] ಮೊತ್ತವು ಸಂದಾಯವಾಗತಕ್ಕದ್ದು.

**1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**
**2. 1985ರ ಅಧಿನಿಯಮ 31ರ ಮೂಲಕ ದಿನಾಂಕ 12.6.1985 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.**

**3. ಸಾದಿಲ್ವಾರು ನಿಧಿಯ ಅಭಿರಕ್ಷೆ ಮತ್ತು ಅದರಿಂದ ಹಣ ಹಿಂತೆಗೆಯುವುದು:-** [1][ಕರ್ನಾಟಕ ರಾಜ್ಯ][1] ದ ಸಾದಿಲ್ವಾರು ನಿಧಿಯನ್ನು [1][ಕರ್ನಾಟಕ ಸರ್ಕಾರದ][1] ಹಣಕಾಸು ಇಲಾಖೆಯ ಕಾರ್ಯದರ್ಶಿಯು ರಾಜ್ಯಪಾಲರ ಪರವಾಗಿ ಧಾರಣ ಮಾಡಿರತಕ್ಕದ್ದು ಮತ್ತು ಅನಿರೀಕ್ಷಿತ ವೆಚ್ಚಗಳನ್ನು ಕಾನೂನಿನ ಮೂಲಕ ಮಾಡಲಾದ ಧನ ವಿನಿಯೋಗದ ಮೇರೆಗೆ ರಾಜ್ಯ ವಿಧಾನ ಮಂಡಲವು ಅಧಿಕೃತಗೊಳಿಸುವ ನಿರೀಕ್ಷೆಯಲ್ಲಿ ಅಂಥ ವೆಚ್ಚಗಳನ್ನು ಭರಿಸುವ ಉದ್ದೇಶಗಳಿಗಾಗಿ ಹೊರತು ಅಂಥ ನಿಧಿಯಿಂದ ಯಾವುದೇ ಮುಂಗಡಗಳನ್ನು ನೀಡತಕ್ಕದ್ದಲ್ಲ.

**1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

**4. ನಿಯಮ ರಚನಾಧಿಕಾರ:-** ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವ ಸಲುವಾಗಿ, ರಾಜ್ಯ ಸರ್ಕಾರವು [1][ಕರ್ನಾಟಕ ರಾಜ್ಯ][1] ದ ಸಾದಿಲ್ವಾರು ನಿಧಿಯ ಅಭಿರಕ್ಷೆ, ಅದಕ್ಕೆ ಹಣ ಸಂದಾಯ ಮಾಡುವುದು ಮತ್ತು ಅದರಿಂದ ಹಣ ಹಿಂತೆಗೆಯುವುದು-ಇವುಗಳಿಗೆ ಸಂಬಂಧಿಸಿದ ಅಥವಾ ಆನುಷಂಗಿಕವಾದ ಎಲ್ಲ ವಿಷಯಗಳನ್ನು ವಿನಿಯಮಿಸುವ ನಿಯಮಗಳನ್ನು ರಚಿಸಬಹುದು.

**1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.**

## ಕರ್ನಾಟಕ ಸಾದಿಲ್ವಾರು ನಿಧಿ ನಿಯಮಗಳು, 1957

(ಕರ್ನಾಟಕ ರಾಜ್ಯಪತ್ರ ಭಾಗ-I , ದಿನಾಂಕ:11.07.1957,ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 65 ಬಿಯುಡಿ 57, ದಿನಾಂಕ 2ನೇ ಜುಲೈ 1957 ಮತ್ತು ಜಿಎಸ್‌ಆರ್ 770 ದಿನಾಂಕ: 30.11.1965 ಹಾಗೂ ಜಿಎಸ್‌ಆರ್ 415 ದಿನಾಂಕ: 28.11.1968 ರಿಂದ ತಿದ್ದುಪಡಿಯಾದಂತೆ)

ಕರ್ನಾಟಕ ಸಾದಿಲ್ವಾರು ನಿಧಿ ಅಧಿನಿಯಮ, 1957 (1957ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ 4ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ:-

1. ಈ ನಿಯಮಗಳನ್ನು "ಕರ್ನಾಟಕ ಸಾದಿಲ್ವಾರು ನಿಧಿ ನಿಯಮಗಳು, 1957" ಎಂದು ಕರೆಯತಕ್ಕದ್ದು.

2. ಈ ನಿಯಮಗಳಲ್ಲಿ "ನಿಧಿ" ಎಂದರೆ, ಕರ್ನಾಟಕ ರಾಜ್ಯದ ಸಾದಿಲ್ವಾರು ನಿಧಿ.

3. (1) ನಿಧಿಯಿಂದ ಮುಂಗಡಗಳನ್ನು ಕೋರಿ ಸಲ್ಲಿಸುವ ಎಲ್ಲಾ ಅರ್ಜಿಗಳನ್ನು ಕರ್ನಾಟಕ ಸರ್ಕಾರದ, ಹಣಕಾಸು ಇಲಾಖೆಯ ಕಾರ್ಯದರ್ಶಿಗೆ ಸಲ್ಲಿಸತಕ್ಕದ್ದು.

(2) ಪ್ರತಿಯೊಂದು ಅರ್ಜಿಯೊಂದಿಗೆ ಈ ಕೆಳಕಂಡವುಗಳನ್ನು ನೀಡತಕ್ಕದ್ದು,-

(ಎ) ಒಳಗೊಳ್ಳುವ ಹೆಚ್ಚುವರಿ ವೆಚ್ಚದ ಸಂಕ್ಷಿಪ್ತ ವಿವರಗಳು;

(ಬಿ) ಬಜೆಟ್‌ನಲ್ಲಿ ಏರ್ಪಾಡು ಮಾಡಲಾಗದುದಕ್ಕೆ ಕಾರಣವಾದ ಸಂದರ್ಭಗಳು;

(ಸಿ) ಇದನ್ನು ಮುಂದೂಡಲು ಏಕೆ ಸಾಧ್ಯವಿಲ್ಲ ಎಂಬುದನ್ನು;

(ಡಿ) ವರ್ಷಕ್ಕಾಗಿ ಅಥವಾ ಸಂದರ್ಭಾನುಸಾರ ವರ್ಷದ ಭಾಗಕ್ಕಾಗಿ ಸಲ್ಲಿಸಿದ ಪ್ರಸ್ತಾವದ ಪೂರ್ಣವೆಚ್ಚವೂ ಸೇರಿದಂತೆ ನಿಧಿಯಿಂದ ಮುಂಗಡವಾಗಿ ನೀಡಬೇಕಾಗಿರುವ ಮೊಬಲಗು; ಮತ್ತು

(ಇ) ಅಂತಿಮವಾಗಿ ಪೂರಕ ಏರ್ಪಾಟನ್ನು ಯಾವ ಅನುದಾನದ ಅಥವಾ ಧನವಿನಿಯೋಗದ ಮೇರೆಗೆ ಪಡೆಯಬಹುದು, ಎಂಬುದನ್ನು.

4. ವಾರ್ಷಿಕ ಹಣಕಾಸು ವಿವರ ಪಟ್ಟಿಯಲ್ಲಿ ಉದ್ದೇಶಿಸಿಲ್ಲದ ಹೊಸ ಸೇವೆಯ ಮೇಲಿನ ವೆಚ್ಚವೂ ಸೇರಿದಂತೆ ಅನಿರೀಕ್ಷಿತ ವೆಚ್ಚವನ್ನು ಭರಿಸುವ ಉದ್ದೇಶಕ್ಕಾಗಿ ನಿಧಿಯಿಂದ ಮುಂಗಡಗಳನ್ನು ನೀಡತಕ್ಕದ್ದು.

5. ನಿಧಿಯಿಂದ ಮುಂಗಡಗಳನ್ನು ಮಂಜೂರು ಮಾಡುವ ಎಲ್ಲ ಆದೇಶಗಳನ್ನು ರಾಜ್ಯಪಾಲರ ಆದೇಶಗಳಾಗಿದ್ದರೆ ಹೇಗೋ ಹಾಗೆ ಹೊರಡಿಸತಕ್ಕದ್ದು. ಮುಂಗಡವನ್ನು ಮಂಜೂರು ಮಾಡುವ ಆದೇಶಗಳು ಹಣದ ಮೊಬಲಗು, ಸಂಬಂಧಪಟ್ಟ ಅನುದಾನ ಅಥವಾ ಧನ ವಿನಿಯೋಜನೆಯನ್ನು ನಿರ್ದಿಷ್ಟಪಡಿಸತಕ್ಕದ್ದು ಮತ್ತು ಯಾವ ವೆಚ್ಚಗಳನ್ನು ಭರಿಸಲು ಮಂಜೂರಾತಿ ನೀಡಲಾಗಿದೆಯೋ ಆ ವೆಚ್ಚಗಳ ಉಪಶೀರ್ಷಿಕೆಗಳು ಮತ್ತು ಧನ ವಿನಿಯೋಗದ ಘಟಕಗಳ ಸಂಕ್ಷಿಪ್ತ ವಿವರಗಳನ್ನು ನೀಡತಕ್ಕದ್ದು ಮತ್ತು ಅದರ ಒಂದು ಪ್ರತಿಯನ್ನು ಕರ್ನಾಟಕ ಸರ್ಕಾರದ ಹಣಕಾಸು ಇಲಾಖೆಯ ಕಾರ್ಯದರ್ಶಿಯು ಕರ್ನಾಟಕದ ಮಹಾಲೇಖಾಪಾಲರು, ಬೆಂಗಳೂರು ಇವರಿಗೆ ಕಳುಹಿಸಿಕೊಡತಕ್ಕದ್ದು.

[1][6. (1) ಹಾಗೆ ಹಣಕಾಸು ನೀಡಲಾದ ವಾರ್ಷಿಕ ಹಣಕಾಸು ವಿವರಪಟ್ಟಿಯಲ್ಲಿ ಉದ್ದೇಶಿಸಿಲ್ಲದ ಹೊಸ ಸೇವೆಯ ಮೇಲಿನ ವೆಚ್ಚವೂ ಸೇರಿ, ಎಲ್ಲ ವೆಚ್ಚದ ಪೂರಕ ಅಂದಾಜುಗಳನ್ನು, (2)ನೇ ಉಪನಿಯಮದ ಉಪಬಂಧಗಳಿಗೆ ಅನುಸಾರವಾಗಿ ಮುಂಗಡವನ್ನು ಸಾದಿಲ್ವಾರು ನಿಧಿಗೆ ಪುನಃ ಒಪ್ಪಿಸಿದ್ದ ಹೊರತು, ಅಂಥ ಮುಂಗಡವನ್ನು ಮಂಜೂರು ಮಾಡಿದ ನಿಕಟೋತ್ತರದಲ್ಲಿ ಸೇರುವ ವಿಧಾನ ಮಂಡಲದ ಮೊದಲ ಅಧಿವೇಶನದಲ್ಲಿ ಮಂಡಿಸತಕ್ಕದ್ದು.

**ವಿವರಣೆ (i)**:- ನಿಧಿಯಿಂದ ಹಣಕಾಸು ನೀಡಿದ ವೆಚ್ಚದ ಅಂದಾಜುಗಳನ್ನು ವಿಧಾನಮಂಡಲದಲ್ಲಿ ಮಂಡಿಸುವಾಗ ಅಂಥ ಅಂದಾಜುಗಳಿಗೆ ಈ ಮುಂದಿನಂತೆ ಒಂದು ಟಿಪ್ಪಣಿಯನ್ನು ಲಗತ್ತಿಸತಕ್ಕದ್ದು:

............. ರಲ್ಲಿ ಸಾದಿಲ್ವಾರು ನಿಧಿಯಿಂದ .................ರೂ.ಗಳ ಮೊತ್ತವನ್ನು ಮುಂಗಡವಾಗಿ ನೀಡಲಾಗಿದೆ ಮತ್ತು ಆ ನಿಧಿಗೆ ಮರುಸಂದಾಯ ಮಾಡಲು ಸಮನಾದ ಮೊತ್ತದ ಅಗತ್ಯವಿದೆ.

**ವಿವರಣೆ (ii)**:- ವಾರ್ಷಿಕ ಹಣಕಾಸು ವಿವರ ಪಟ್ಟಿಯಲ್ಲಿ ಉದ್ದೇಶಿಸಿಲ್ಲದ ಹೊಸ ಸೇವೆಯ ಮೇಲಿನ ವೆಚ್ಚವನ್ನು ಪೂರ್ಣವಾಗಿ ಅಥವಾ ಭಾಗಶಃ ಅಧಿಕೃತ ಧನವಿನಿಯೋಜನೆಯಲ್ಲಿ ಲಭ್ಯವಿರುವ ಉಳಿತಾಯದಿಂದ ಭರಿಸಬಹುದಾಗಿರುವಲ್ಲಿ, ಸಲ್ಲಿಸಲಾಗುವ ಅಂದಾಜಿಗೆ ಈ ಮುಂದಿನ ನಮೂನೆಯಲ್ಲಿ ಒಂದು ಟಿಪ್ಪಣಿಯನ್ನು ಲಗತ್ತಿಸತಕ್ಕದ್ದು:

'ಈ ವೆಚ್ಚವನ್ನು ಹೊಸ ಸೇವೆಗೆ ಮಾಡಲಾಗಿದೆ .......................... ರಲ್ಲಿ ಸಾದಿಲ್ವಾರು ನಿಧಿಯಿಂದ ......................... ರೂ.ಗಳ ಮೊತ್ತವನ್ನು ಮುಂಗಡವಾಗಿ ನೀಡಲಾಗಿದೆ ಮತ್ತು ಆ ನಿಧಿಗೆ ಹಣ ಮರುಸಂದಾಯ ಮಾಡಲು ಅನುಕೂಲವಾಗುವಂತೆ ಸಮನಾದ ಮೊತ್ತವು ಅಗತ್ಯವಾಗಿ ಬೇಕಾಗಿದೆ. ಆ ಮೊತ್ತವನ್ನು/ ಆ ಮೊತ್ತದ ಭಾಗವನ್ನು, ಎಂದರೆ .................. ರೂ.ಗಳನ್ನು ಅನುದಾನಗಳಲ್ಲಿ ಉಂಟಾದ ಉಳಿತಾಯಗಳ ಮರುವಿನಿಯೋಗದಿಂದ ಭರಿಸಬಹುದು ಮತ್ತು ಲೇಖಾನುದಾನದಿಂದ ಪಡೆಯಬಹುದು. ಉಳಿದ ಮೊತ್ತಕ್ಕೆ, ಎಂದರೆ, ..................... ರೂ.ಗಳಿಗೆ ಮಾತ್ರ ಲೇಖಾನುದಾನವು ಅಗತ್ಯವಿದೆ'.

(2) ವಿಧಾನ ಮಂಡಲವು ಪೂರಕ ಧನವಿನಿಯೋಗ ಅಧಿನಿಯಮದ ಮೂಲಕ ಹೆಚ್ಚುವರಿ ವೆಚ್ಚವನ್ನು ಅಧಿಕೃತಗೊಳಿಸಿದ ಕೂಡಲೇ ಪೂರಕ ಅಂದಾಜುಗಳನ್ನು ವಿಧಾನಮಂಡಲದಲ್ಲಿ ಮಂಡಿಸುವುದಕ್ಕೆ ಮೊದಲು ಭರಿಸಿದ ಅಥವಾ ಅವುಗಳನ್ನು ಹಾಗೆ ಮಂಡಿಸಿದ ನಂತರ ಭರಿಸಿದ ವೆಚ್ಚವನ್ನು ತೂಗಿಸಲು ಸಾದಿಲ್ವಾರು ನಿಧಿಯಿಂದ ನೀಡಲಾದ ಮುಂಗಡ ಅಥವಾ ಮುಂಗಡಗಳು ಅಧಿನಿಯಮದಲ್ಲಿ ಮಾಡಲಾದ ವಿನಿಯೋಗದ ಪೂರ್ಣ ಪ್ರಮಾಣದ ಮೊತ್ತವು ನಿಧಿಗೆ ಪುನಃ ವಾಪಸಾಗತಕ್ಕದ್ದು.][1]

**1. ನಿಯಮ 6ನ್ನು ಜಿಎಸ್‌ಆರ್ 770 ದಿನಾಂಕ: 30.11.1965ರ ಮೂಲಕ ಪ್ರತಿಯೋಜಿಸಲಾಗಿದೆ.**

7. 5ನೇ ನಿಯಮಕ್ಕೆ ಅನುಸಾರವಾಗಿ ನಿಧಿಯಿಂದ ಮುಂಗಡವನ್ನು ಮಂಜೂರು ಮಾಡುವ ಆದೇಶವನ್ನು ಹೊರಡಿಸಿದ ತರುವಾಯ ಮತ್ತು 6ನೇ ನಿಯಮಕ್ಕೆ ಅನುಸಾರವಾಗಿ ಕ್ರಮ ಕೈಗೊಳ್ಳುವ ಮೊದಲು ಯಾವುದೇ ಸಂದರ್ಭದಲ್ಲಿ, ಮಂಜೂರಾದ ಮುಂಗಡವು ಪೂರ್ಣವಾಗಿ ಅಥವಾ ಭಾಗಶಃ ಉಪಯೋಗವಾಗದೆ ಉಳಿಯುವುದೆಂದು ಕಂಡುಬಂದರೆ, ಮಂಜೂರಾತಿಯನ್ನು ರದ್ದುಗೊಳಿಸುವುದಕ್ಕಾಗಿ ಅಥವಾ ಸಂದರ್ಭಾನುಸಾರ ಅದನ್ನು ಮಾರ್ಪಾಟು ಮಾಡುವುದಕ್ಕಾಗಿ ಮಂಜೂರಾತಿ ಪ್ರಾಧಿಕಾರಕ್ಕೆ ಒಂದು ಅರ್ಜಿಯನ್ನು ಸಲ್ಲಿಸತಕ್ಕದ್ದು.

[1][8. ಆ ವರ್ಷದ ಬಜೆಟ್ ಅಂದಾಜುಗಳಲ್ಲಿ ಅವಶ್ಯ ಏರ್ಪಾಟುಗಳನ್ನು ಮಾಡಿದ 'ಹೊಸ ಸೇವೆ' ಬಾಬುಗಳೂ ಸೇರಿದಂತೆ ಧನ ವಿನಿಯೋಗ (ಲೇಖಾನುದಾನ) ಅಧಿನಿಯಮದಲ್ಲಿ ಸೇರಿಸಲಾದ ಸೇವೆಗಳಿಗೆ ಏರ್ಪಾಟು ಮಾಡಿದ್ದಕ್ಕಿಂತ ಹೆಚ್ಚಿನ ವೆಚ್ಚವನ್ನು ಭರಿಸಲು ನಿಧಿಯಿಂದ ಮಂಜೂರು ಮಾಡಲಾದ ಎಲ್ಲ ಮುಂಗಡಗಳು, ನಿಧಿಯಿಂದ ನೀಡಲಾದ ಮುಂಗಡಗಳಿಂದ ಭರಿಸಲಾದ ಹೆಚ್ಚಿನ ವೆಚ್ಚವೂ ಸೇರಿದಂತೆ ಅದರಿಂದ ಭರಿಸಲಾದ ಇಡೀ ವರ್ಷದ ಸೇವೆಯ ಮೇಲಿನ ವೆಚ್ಚದ ಸಂಬಂಧದಲ್ಲಿ, ಧನ ವಿನಿಯೋಗ ಅಧಿನಿಯಮವು ಅನುಮೋದನೆಗೊಂಡ ಕೂಡಲೇ ನಿಧಿಗೆ ಪುನಃ ವಾಪಸಾಗತಕ್ಕದ್ದು. ಮೇಲೆ ಉಲ್ಲೇಖಿಸಿದ 'ಹೊಸ ಸೇವೆ' ಬಾಬುಗಳಿಗಾಗಿ ನಿಧಿಯಿಂದ ಮುಂಗಡಗಳನ್ನು ನೀಡಿದ ಸಂದರ್ಭಗಳಲ್ಲಿ, ಅನುಬಂಧಿಸಲಾದ ನಮೂನೆ II ರಲ್ಲಿ ಹಣಕಾಸು ಇಲಾಖೆಯು ಒಂದು ವಿವರಪಟ್ಟಿಯನ್ನು ತಯಾರಿಸತಕ್ಕದ್ದು ಮತ್ತು ಅದನ್ನು ರಾಜ್ಯ ವಿಧಾನ ಮಂಡಲದಲ್ಲಿ ಆ ವರ್ಷದ ಧನ ವಿನಿಯೋಗ ವಿಧೇಯಕವನ್ನು ಮಂಡಿಸುವುದಕ್ಕೆ ಮುಂಚೆ ಮಂಡಿಸತಕ್ಕದ್ದು. ][1]

**1. ನಿಯಮ 8ನ್ನು ಜಿಎಸ್‌ಆರ್ 415 ದಿನಾಂಕ: 28.11.1968ರ ಮೂಲಕ ಪ್ರತಿಯೋಜಿಸಲಾಗಿದೆ.**

9. ಮುಂಗಡವನ್ನು ವಾಪಸು ಪಡೆಯುವ ಆದೇಶವು ಮೂಲ ಮುಂಗಡವನ್ನು ನೀಡಿದ ಆದೇಶದ ಸಂಖ್ಯೆ ಮತ್ತು ದಿನಾಂಕ ಮತ್ತು 6ನೇ ನಿಯಮದಲ್ಲಿ ತಿಳಿಸಿದ ಪೂರಕ ಧನ ವಿನಿಯೋಗ ಅಧಿನಿಯಮದ ಉಲ್ಲೇಖವನ್ನು ಕೊಡತಕ್ಕದ್ದು ಮತ್ತು ಅದರ ಒಂದು ಪ್ರತಿಯನ್ನು ಕರ್ನಾಟಕ ಸರ್ಕಾರದ ಹಣಕಾಸು ಇಲಾಖೆಯ ಕಾರ್ಯದರ್ಶಿಯು, ಕರ್ನಾಟಕದ ಮಹಾಲೇಖಪಾಲರು, ಬೆಂಗಳೂರು ಇವರಿಗೆ ಕಳುಹಿಸತಕ್ಕದ್ದು.

10. ನಿಧಿಯ ವ್ಯವಹಾರದ ಲೆಕ್ಕವನ್ನು ಹಣಕಾಸು ಇಲಾಖೆಯು ಈ ನಿಯಮಗಳಿಗೆ [1][ಲಗತ್ತಿಸಿದ ನಮೂನೆ-Iರಲ್ಲಿ][1] ನಿರ್ವಹಿಸತಕ್ಕದ್ದು.

**1. ಜಿಎಸ್‌ಆರ್ 415 ದಿನಾಂಕ: 28.11.1968ರ ಮೂಲಕ ಪ್ರತಿಯೋಜಿಸಲಾಗಿದೆ.**

11. ನಿಧಿಯಿಂದ ಮುಂಗಡಗಳಿಗಾಗಿ ಭರಿಸಲಾದ ವಾಸ್ತವಿಕ ವೆಚ್ಚವನ್ನು ಇಲಾಖೆಗಳು ನಿಧಿಗೆ ಸಂಬಂಧಪಟ್ಟ ಲೆಕ್ಕದಲ್ಲಿ, ಅವುಗಳನ್ನು ಸಂಚಿತ ನಿಧಿಯಿಂದ ಸಂದಾಯ ಮಾಡಿದ್ದರೆ ಆಗ ಹೇಗೆ ತೋರಿಸಲಾಗುತ್ತಿತ್ತೋ ಅದೇ ರೀತಿಯಲ್ಲಿ ವಿವರಿಸುವಂತೆ ದಾಖಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಸಹಿ

ಸರ್ಕಾರದ ಕಾರ್ಯದರ್ಶಿ,

ಹಣಕಾಸು ಇಲಾಖೆ.

[1][ನಮೂನೆ-I][1]

1. ಜಿಎಸ್‌ಆರ್ 415 ದಿನಾಂಕ: 28.11.1968ರ ಮೂಲಕ ಪುನರ್ ಅಂಕಿತಗೊಳಿಸಲಾಗಿದೆ.

**ಕರ್ನಾಟಕ ರಾಜ್ಯದ ಸಾದಿಲ್ವಾರು ನಿಧಿ**

**ನಿಧಿಯ ಮೊತ್ತ.................ಇಪ್ಪತ್ತು ಕೋಟಿ ರೂಪಾಯಿ ಮಾತ್ರ**

| ಕ್ರ. ಸಂ. | ವ್ಯವಹಾರದ ದಿನಾಂಕ | ಅನುದಾನದ ಅಥವಾ ಧನ ವಿನಿಯೋಗದ ಸಂಖ್ಯೆ ಮತ್ತು ಹೆಸರು | ಮುಂಗಡಕ್ಕಾಗಿ ಸಲ್ಲಿಸಲಾದ ಅರ್ಜಿಯ ಸಂಖ್ಯೆ ಮತ್ತು ದಿನಾಂಕ | ಮುಂಗಡ ನೀಡುವ ಆದೇಶದ ಸಂಖ್ಯೆ ಮತ್ತು ದಿನಾಂಕ | ಮುಂಗಡ ನೀಡದ ಮೊತ್ತ | ಹೆಚ್ಚುವರಿ ವೆಚ್ಚಕ್ಕಾಗಿ ಉಪಬಂಧಿಸುವ ಪೂರಕ ಧನ ವಿನಿಯೋಗ ಅಧಿನಿಯಮ | ವಾಪಸು ಪಡೆದ ಮುಂಗಡದ ಮೊತ್ತ | ನಗದು ವ್ಯವಹಾರದ ತರುವಾಯದ ಶಿಲ್ಕು | ಪ್ರಭಾರಿ ಅಧಿಕಾರಿಯ ಚಿಕ್ಕ ಸಹಿ | ಷರಾ |
|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 |

**ಟಿಪ್ಪಣಿ:** (1) ಪ್ರತಿಯೊಂದು ವ್ಯವಹಾರದ ತರುವಾಯ ಶಿಲ್ಕನ್ನು ತೋರಿಸತಕ್ಕದ್ದು.

(2) ಮುಂಗಡದ ಮೊತ್ತವನ್ನು ನೀಡಿದಾಗ ಕಪ್ಪು ಶಾಯಿಯಲ್ಲೂ ಮತ್ತು ವಾಪಸು ಪಡೆದಾಗ ಕೆಂಪು ಶಾಯಿಯಲ್ಲೂ ನಮೂದಿಸತಕ್ಕದ್ದು.

**ನಮೂನೆ-II**

...........ವರ್ಷದ ಬಜೆಟ್ ಅಂದಾಜಿನಲ್ಲಿ ಅವಶ್ಯ ಏರ್ಪಾಡುಗಳನ್ನು ಮಾಡಲಾಗಿದ್ದ "ಹೊಸ ಸೇವೆಯ" ಮೇಲಿನ ವೆಚ್ಚಕ್ಕೆ "ಲೇಖಾನುದಾನದ" ಅವಧಿಯಲ್ಲಿ ಸಾದಿಲ್ವಾರು ನಿಧಿಯಿಂದ ತೆಗೆಯಲಾದ ಮುಂಗಡಗಳನ್ನು ತೋರಿಸುವ ವಿವರ ಪಟ್ಟಿ. ಧನ ವಿನಿಯೋಗ ಅಧಿನಿಯಮವು ಅಂಗೀಕಾರವಾದ ನಂತರ ಮುಂಗಡವನ್ನು ನಿಧಿಗೆ ಮರು ಭರ್ತಿ ಮಾಡಲಾಗುವುದು.

| ಸೇವೆಯ ವಿವರಗಳು | ಇಲಾಖೆಯ ಹೆಸರು | ಸಾದಿಲ್ವಾರು ನಿಧಿಯಿಂದ ನೀಡಲಾದ ಮುಂಗಡದ ಮೊತ್ತ | ವರ್ಷದ ಬಜೆಟ್ ಅಂದಾಜುಗಳಲ್ಲಿ ಏರ್ಪಾಟು ಇರುವ ಅನುದಾನದ ಸಂಖ್ಯೆ ಮತ್ತು ಹೆಸರು ಹಾಗೂ ಏರ್ಪಾಟಿನ ಮೊತ್ತ | ಅನುದಾನಗಳಿಗಾಗಿ ಸಲ್ಲಿಸುವ ಬೇಡಿಕೆಯನ್ನು ವಿಧಾನ ಮಂಡಲವು ಪುರಸ್ಕರಿಸುವವರೆಗೆ ವೆಚ್ಚವನ್ನು ಮುಂದೂಡಲು ಏಕೆ ಸಾಧ್ಯವಾಗಲಿಲ್ಲ ಎಂಬ ಬಗ್ಗೆ ಸಂಕ್ಷಿಪ್ತ ಕಾರಣ |
|---|---|---|---|---|
| 1 | 2 | 3 | 4 | 5 |

[ಸಂ.ಎಫ್.ಡಿ.5 ಬಿಸಿಎಫ್ 67]

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಂಗರಾಜ ಅಯ್ಯಂಗಾರ್**

ಉಪಕಾರ್ಯದರ್ಶಿ.

The above translation of the Karnataka Contigency Fund Act 1957 (11 of 57) and the Karnataka Contigency Fund Rules, 1957 shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

**GOVERNOR OF KARNATAKA**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ

ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1192

**ಜಿ.ಕೆ. ಬೋರೇಗೌಡ**

ಸರ್ಕಾರದ ಕಾರ್ಯದರ್ಶಿ

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

## ಅಧಿಸೂಚನೆ

**ಸಂಖ್ಯೆ : ಸಂವ್ಯಶಾಇ 56 ರಾಶಾಪ್ರ 2006, ಬೆಂಗಳೂರು, ದಿನಾಂಕ: 17ನೇ ಜುಲೈ 2006**

ಕರ್ನಾಟಕ ತೆರಿಗೆ ಸಂದಾಯ ನಿರಾಕರಣೆಯ ಅಥವಾ ಮುಂದೂಡುವಿಕೆಯ ಪ್ರಚೋದನಾ ಪ್ರತಿಬಂಧಕ ಅಧಿನಿಯಮ, 1981 (1981 ರ52) ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

**ಕರ್ನಾಟಕ ತೆರಿಗೆ ಸಂದಾಯ ನಿರಾಕರಣೆಯ ಅಥವಾ ಮುಂದೂಡುವಿಕೆಯ ಪ್ರಚೋದನಾ ಪ್ರತಿಬಂಧಕ ಅಧಿನಿಯಮ, 1981**

**ಪ್ರಕರಣಗಳ ಅನುಕ್ರಮಣಿಕೆ**

**ಪ್ರಕರಣಗಳು**

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

**1981 ರ ಅಧಿನಿಯಮ 52:-** ಸರ್ಕಾರಕ್ಕೆ, ಶಾಸನಬದ್ದ ಮಂಡಲಿಗಳಿಗೆ ಮತ್ತು ಸಹಕಾರಿ ಸಂಸ್ಥೆಗಳಿಗೆ ತೆರಿಗೆಯನ್ನು ಮತ್ತು ಇತರ ಬಾಕಿಗಳನ್ನು ಸಂದಾಯ ಮಾಡುವುದರ ವಿರುದ್ಧ ರಾಜ್ಯದಲ್ಲಿ ಕೆಲವು ವ್ಯಕ್ತಿಗಳು ತೀವ್ರ ಹೋರಾಟ ನಡೆಸಿದ್ದಾರೆ. ಮುಖ್ಯವಾಗಿ ಅಂಥ ಚಳುವಳಿಗಳನ್ನು ನಡೆಸುವ ವ್ಯಕ್ತಿಗಳ ವಿರುದ್ಧ ಮತ್ತು ಸರ್ಕಾರಕ್ಕೆ ಬರಬೇಕಾದ ಬಾಕಿಗಳ ವಸೂಲಿಗೆ ಅಡ್ಡಿಪಡಿಸುವ ವ್ಯಕ್ತಿಗಳ ವಿರುದ್ಧ ಪರಿಣಾಮಕಾರಿ ಕ್ರಮಗಳನ್ನು ಕೈಗೊಳ್ಳಲು ಸಾಧ್ಯವಾಗುವಂತೆ ಮಾಡುವ ದೃಷ್ಟಿಯಿಂದ, ಈ ಉದ್ದೇಶಕ್ಕಾಗಿ ಪ್ರತ್ಯೇಕ ಶಾಸನ ರಚಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದುದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆ, ಭಾಗ-IV 2ಎ ಸಂಖ್ಯೆ 476 ದಿನಾಂಕ 24.6.1981, ಪುಟ 5 ರಲ್ಲಿ ಪ್ರಕಟವಾಗಿದೆ.)

## 1981ರ ಕರ್ನಾಟಕ ಅಧಿನಿಯಮ ಸಂಖ್ಯೆ 52

(1981ರ ಡಿಸೆಂಬರ್ ಹದಿನೆಂಟನೆಯ ದಿನದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ.)

## ಕರ್ನಾಟಕ ತೆರಿಗೆ ಸಂದಾಯದ ತಿರಸ್ಕರಣೆಯ ಅಥವಾ ಮುಂದೂಡುವಿಕೆಯ ಪ್ರಚೋದನಾ ಪ್ರತಿಬಂಧಕ ಅಧಿನಿಯಮ, 1981

*(1981ರ ನವೆಂಬರ್ ಇಪ್ಪತ್ತೈದನೆಯ ದಿನದಂದು ರಾಷ್ಟ್ರಪತಿಯವರ ಅನುಮೋದನೆಯನ್ನು ಪಡೆಯಲಾಗಿದೆ.)*

**ಸರ್ಕಾರ ಮತ್ತು ಇತರ ಪ್ರಾಧಿಕಾರಗಳಿಗೆ ಸಂದಾಯ ಮಾಡಬೇಕಾದ ತೆರಿಗೆ ಮತ್ತು ಇತರ ಬಾಕಿಗಳ ನಿರಾಕರಣೆಗೆ ಅಥವಾ ಮುಂದೂಡುವಿಕೆಗೆ ಪ್ರಚೋದಿಸುವುದನ್ನು ಪ್ರತಿಬಂಧಿಸಲು ಒಂದು ಅಧಿನಿಯಮ.**

ಸರ್ಕಾರ ಮತ್ತು ಇತರ ಪ್ರಾಧಿಕಾರಗಳಿಗೆ ಸಂದಾಯ ಮಾಡಬೇಕಾದ ತೆರಿಗೆ ಮತ್ತು ಇತರ ಬಾಕಿಗಳ ನಿರಾಕರಣೆಗೆ ಅಥವಾ ಮುಂದೂಡುವಿಕೆಗೆ ಪ್ರಚೋದಿಸುವುದನ್ನು ಪ್ರತಿಬಂಧಿಸುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಮೂವತ್ತೆರಡನೆಯ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:-

**1. ಚಿಕ್ಕ ಹೆಸರು ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು ಕರ್ನಾಟಕ ತೆರಿಗೆ ಸಂದಾಯ ನಿರಾಕರಣೆಯ ಅಥವಾ ಮುಂದೂಡುವಿಕೆಯ ಪ್ರಚೋದನಾ ಪ್ರತಿಬಂಧಕ ಅಧಿನಿಯಮ, 1981 ಎಂದು ಕರೆಯತಕ್ಕದ್ದು.

(2) ಇದು, 1981ರ ಏಪ್ರಿಲ್ ಇಪ್ಪತ್ತೊಂದನೆಯ ದಿನಾಂಕದಂದು ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

**2. ರಾಜ್ಯ ಸರ್ಕಾರಕ್ಕೆ ಬಾಕಿಯಿರುವ ಭೂ ಕಂದಾಯ, ತೆರಿಗೆ, ಇತ್ಯಾದಿ ಸಂದಾಯದ ನಿರಾಕರಣೆಗೆ ಅಥವಾ ಮುಂದೂಡುವಿಕೆಗೆ ಪ್ರಚೋದಿಸಿದುದಕ್ಕಾಗಿ ಶಿಕ್ಷೆ.-** ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಯಾರೇ ಆಗಲಿ ಮೌಖಿಕ ಅಥವಾ ಲಿಖಿತ ಅಥವಾ ಶಬ್ದಗಳ ಮೂಲಕವಾಗಲಿ ಅಥವಾ ದೃಷ್ಟಿಗೋಚರ ನಿರೂಪಣೆ ಮೂಲಕವಾಗಲಿ ಅಥವಾ ಇತರ ರೀತಿಯಲ್ಲಾಗಲಿ ಸಾರ್ವಜನಿಕ ಶಾಂತಿ, ಭದ್ರತೆ ಮತ್ತು ನೆಮ್ಮದಿಯನ್ನು ಮತ್ತು ರಾಜ್ಯದ ಆರ್ಥಿಕ ಭದ್ರತೆಯನ್ನು ಕದಡುವ ಉದ್ದೇಶದಿಂದ,-

(ಎ). (i) ರಾಜ್ಯ ಸರ್ಕಾರಕ್ಕೆ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರಕ್ಕೆ ಸಂದಾಯ ಮಾಡಬೇಕಾದ ಅಥವಾ ಯಾವುದೇ ಕಾನೂನಿನ ಅನುಸಾರವಾಗಿ ಅಥವಾ ಕಾನೂನಿನ ಬಲವನ್ನು ಹೊಂದಿರುವ ರೂಢಿಯ ಅಡಿಯಲ್ಲಿ ಸಮುದಾಯಕ್ಕೆ ಸಲ್ಲಿಸಲಾದ ಯಾವುದೇ ಸೇವೆಗಾಗಿ, ಸಂದಾಯ ಮಾಡಬೇಕಾದ ಯಾವುದೇ ಭೂಕಂದಾಯ, ತೆರಿಗೆ, ಸ್ಥಳೀಯಕರ, ಉಪ ಕರ ಅಥವಾ ಇತರ ಬಾಕಿಗಳನ್ನು ಅಥವಾ ಮೊಬಲಗನ್ನು ಅಥವಾ ಕೃಷಿ ಭೂಮಿಯ ಯಾವುದೇ ಗೇಣಿಯ ಬಾಕಿಯೆಂಬಂತೆ ಅಥವಾ ಅದರೊಂದಿಗೆ ವಸೂಲು ಮಾಡಬಹುದಾದ ಯಾವುದನ್ನೂ; ಅಥವಾ

(ii) ಕರ್ನಾಟಕ ವಿದ್ಯುಚ್ಛಕ್ತಿ ಮಂಡಲಿಗೆ ಸಂದಾಯ ಮಾಡಬೇಕಾದ ಯಾವುದೇ ದರ, ಉಪಕರ ಅಥವಾ ಇತರ ಬಾಕಿಗಳು ಅಥವಾ ಮೊಬಲಗನ್ನು; ಅಥವಾ

(iii) ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ (1959ರ ಕರ್ನಾಟಕ ಅಧಿನಿಯಮ 11)ರ ಅಡಿಯಲ್ಲಿ ನೋಂದಾಯಿತವಾದ ಅಥವಾ ನೋಂದಾಯಿತವಾಗಿದೆಯೆಂದು ಭಾವಿಸಲಾದ ಯಾವುದೇ ಸಹಕಾರ ಸಂಘಕ್ಕೆ (ರಾಜ್ಯ ಅಥವಾ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕ್‌ಗಳೂ ಸೇರಿದಂತೆ) ಸಂದಾಯ ಮಾಡಬೇಕಾದ ಯಾವುವೇ ಬಾಕಿಗಳನ್ನು ಅಥವಾ ಮೊಬಲಗನ್ನು

- ಸಂದಾಯ ಮಾಡುವುದನ್ನು ನಿರಾಕರಿಸುವಂತೆ ಅಥವಾ ಮುಂದೂಡುವಂತೆ ಅಥವಾ ಅದರ ಸಂದಾಯ ಅಥವಾ ವಸೂಲಿಗೆ ಪ್ರತಿರೋಧಿಸುವಂತೆ ಅಥವಾ ಅಡ್ಡಿಪಡಿಸುವಂತೆ ಸಾಮಾನ್ಯವಾಗಿ ಯಾರೇ ವ್ಯಕ್ತಿಯನ್ನು ಅಥವಾ ವ್ಯಕ್ತಿಗಳ ಗುಂಪನ್ನು ಅಥವಾ ಸಾರ್ವಜನಿಕರನ್ನು ಉತ್ತೇಜಿಸಿದರೆ ಅಥವಾ ಪ್ರೇರೇಪಿಸಿದರೆ; ಅಥವಾ

(ಬಿ) ಲೋಕ ನೌಕರರನ್ನು ಅಥವಾ ಸರ್ಕಾರಿ ನೌಕರರ ಯಾವುದೇ ವರ್ಗವನ್ನು ಅಥವಾ ಯಾರೇ ಒಬ್ಬ ಲೋಕ ನೌಕರನ ಸರ್ಕಾರಿ ಪ್ರಕಾರ್ಯಗಳ ನಿರ್ವಹಣೆಗೆ ಅಡ್ಡಿಯುಂಟುಮಾಡುವಂತೆ ಅವರ ವಿರುದ್ಧ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಆಪರಾಧಿಕ ಬಲವನ್ನು ಬಳಸುವಂತೆ ಪ್ರಚೋದಿಸಿದರೆ

- ಐದು ವರ್ಷಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಠಿಣ ಕಾರಾವಾಸದಿಂದ ಮತ್ತು ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ದಂಡದಿಂದ ಶಿಕ್ಷಿಸತಕ್ಕದ್ದು, ಆದರೆ, ಅಂಥ ಕಠಿಣ ಕಾರಾವಾಸ ಶಿಕ್ಷೆಯು ಎರಡು ವರ್ಷಗಳಿಗಿಂತ ಕಡಿಮೆಯಾಗಿರತಕ್ಕದ್ದಲ್ಲ ಮತ್ತು ಅಂಥ ದಂಡವು ಮೂರು ಸಾವಿರ ರೂಪಾಯಿಗಳಿಗಿಂತ ಕಡಿಮೆಯಾಗಿರತಕ್ಕದ್ದಲ್ಲ.

**ವಿವರಣೆ:-** ಈ ಪ್ರಕರಣದ ಉದ್ದೇಶಗಳಿಗಾಗಿ 'ಲೋಕ ನೌಕರ' ಎಂಬುದು ಭಾರತ ದಂಡ ಸಂಹಿತೆ, 1860ರ (1860ರ ಕೇಂದ್ರಾಧಿನಿಯಮ XLV) 21 ನೇ ಪ್ರಕರಣದಲ್ಲಿ ಅದಕ್ಕೆ ನೀಡಲಾದ ಅರ್ಥವನ್ನೇ ಹೊಂದಿರತಕ್ಕದ್ದು.

**3. ದುಷ್ಪ್ರೇರಣೆಯು ಒಂದು ಅಪರಾಧವಾಗಿರುವುದು:-** 2ನೇ ಪ್ರಕರಣದ ಅಡಿಯಲ್ಲಿ ಶಿಕ್ಷಾರ್ಹವಾದ ಯಾವುದೇ ಅಪರಾಧವನ್ನು ಮಾಡಲು ದುಷ್ಪ್ರೇರಿಸುವ ಯಾರೇ ವ್ಯಕ್ತಿಯು ಅಪರಾಧವನ್ನು ಮಾಡಿದ್ದಾನೆಂದು ಭಾವಿಸತಕ್ಕದ್ದು.

**4. ಕಂಪನಿಗಳಿಂದ ಅಪರಾಧಗಳು:-** (1) ಈ ಅಧಿನಿಯಮದ ಅಡಿಯಲ್ಲಿನ ಒಂದು ಅಪರಾಧವನ್ನು ಕಂಪನಿಯು ಮಾಡಿದ್ದರೆ, ಆ ಅಪರಾಧವನ್ನು ಮಾಡಿದ್ದ ಸಮಯದಲ್ಲಿ ಕಂಪನಿಯ ವ್ಯವಹಾರವನ್ನು ನಡೆಸಲು ಕಂಪನಿಯ ಪ್ರಭಾರದಲ್ಲಿದ್ದ ಮತ್ತು ಅದರ ಜವಾಬ್ದಾರಿಯನ್ನು ಹೊಂದಿದ ಪ್ರತಿಯೊಬ್ಬ ವ್ಯಕ್ತಿಯು ಹಾಗೂ ಕಂಪನಿ ಆ ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ತದನುಸಾರವಾಗಿ ತಮ್ಮ ವಿರುದ್ಧದ ವ್ಯವಹರಣೆಗೆ ಮತ್ತು ದಂಡನೆಗೆ ಗುರಿಯಾಗತಕ್ಕದ್ದು:

ಪರಂತು, ಆ ಅಪರಾಧವು ತನ್ನ ಗಮನಕ್ಕೆ ಬಾರದೆ ಘಟಿಸಿದೆಯೆಂದು ಅಥವಾ ಆ ಅಪರಾಧವು ನಡೆಯುವುದನ್ನು ತಡೆಯಲು ಎಲ್ಲ ಮುಕ್ತ ಜಾಗರೂಕತೆಯನ್ನೂ ತಾನು ವಹಿಸಿದ್ದೆನೆಂದು ಯಾರೇ ವ್ಯಕ್ತಿ ರುಜುವಾತು ಪಡಿಸಿದರೆ, ಈ ಉಪ ಪ್ರಕರಣದಲ್ಲಿರುವುದು ಯಾವುದೂ ಅವನನ್ನು ದಂಡನೆಗೆ ಗುರಿಪಡಿಸತಕ್ಕದ್ದಲ್ಲ.

(2) (1)ನೇ ಉಪ ಪ್ರಕರಣದಲ್ಲಿ ಏನೇ ಇದ್ದರೂ ಈ ಅಧಿನಿಯಮದ ಅಡಿಯಲ್ಲಿ ಯಾವುದೇ ಅಪರಾಧವನ್ನು ಕಂಪನಿಯು ಮಾಡಿದ್ದರೆ ಮತ್ತು ಆ ಅಪರಾಧವು ಕಂಪನಿಯ ಯಾರೇ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯ ಸಮ್ಮತಿ ಅಥವಾ ಪರೋಕ್ಷ ಸಮ್ಮತಿಯಿಂದ ನಡೆಯಿತೆಂದು ರುಜುವಾತಾದಲ್ಲಿ ಅಥವಾ ಅವನ ಯಾವುದೇ ನಿರ್ಲಕ್ಷ್ಯದಿಂದ ನಡೆಯಿತೆಂದು ಆರೋಪಿಸಬಹುದಾಗಿರುವಲ್ಲಿ ಅಂಥ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯನ್ನು ಆ ಅಪರಾಧದ ತಪ್ಪಿತಸ್ಥನೆಂದು ಸಹ ಭಾವಿಸತಕ್ಕದ್ದು ಮತ್ತು ತದನುಸಾರವಾಗಿ ಕ್ರಮಕ್ಕೆ ಮತ್ತು ಶಿಕ್ಷೆಗೆ ಅವರು ಗುರಿಯಾಗತಕ್ಕದ್ದು.

**ವಿವರಣೆ. –** ಈ ಪ್ರಕರಣದ ಉದ್ದೇಶಗಳಿಗಾಗಿ,-

(ಎ) "ಕಂಪನಿ" ಎಂದರೆ ಯಾವುದೇ ನಿಗಮಿತ ನಿಕಾಯ ಮತ್ತು ಅದು ಒಂದು ಫರ್ಮನ್ನು ಅಥವಾ ಇತರ ವ್ಯಕ್ತಿಗಳ ಸಂಘವನ್ನು ಒಳಗೊಳ್ಳುತ್ತದೆ; ಮತ್ತು

(ಬಿ) ಒಂದು ಫರ್ಮಿನ ಸಂಬಂಧದಲ್ಲಿ "ನಿರ್ದೇಶಕ" ಎಂದರೆ ಆ ಫರ್ಮಿನ ಒಬ್ಬ ಪಾಲುದಾರ.

**5. ನಿಯಮ ರಚನಾಧಿಕಾರ:-** (1) ರಾಜ್ಯ ಸರ್ಕಾರವು ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸಲು ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ, ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚಿನ ನಿಕಟೋತ್ತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಮಂಡಿಸತಕ್ಕದ್ದು ಮತ್ತು ಹಾಗೆ ಮಂಡಿಸಲಾದ ಅಧಿವೇಶನದ ಅಥವಾ ನಿಕಟ ತರುವಾಯದ ಅಧಿವೇಶನದ ಮುಕ್ತಾಯಕ್ಕೆ ಮುಂಚೆ ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡೂ ಸದನಗಳು ಒಪ್ಪಿದರೆ ಅಥವಾ ನಿಯಮವನ್ನು ರಚಿಸಬಾರದೆಂದು ಎರಡೂ ಸದನಗಳು ಒಪ್ಪಿದರೆ, ಆ ನಿಯಮವು ಹಾಗೆ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮದ ಅಡಿಯಲ್ಲಿ ಈ ಹಿಂದೆ ಮಾಡಲಾದ ಯಾವುದೇ ಕಾರ್ಯದ ಕಾನೂನು ಮಾನ್ಯತೆಗೆ ಬಾಧಕ ಉಂಟುಮಾಡತಕ್ಕದ್ದಲ್ಲ.

**6. ನಿರಸನ ಮತ್ತು ಉಳಿಸುವಿಕೆಗಳು:-** (1) ಕರ್ನಾಟಕ ತೆರಿಗೆ ಸಂದಾಯ ನಿರಾಕರಣೆಯ ಅಥವಾ ಮುಂದೂಡುವಿಕೆಯ ಪ್ರಚೋದನಾ ಪ್ರತಿಬಂಧಕ ಅಧ್ಯಾದೇಶ, 1981ನ್ನು (1981ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 7) ಈ ಮೂಲಕ ನಿರಸನಗೊಳಿಸಲಾಗಿದೆ.

(2) ಹಾಗೆ ನಿರಸನಗೊಂಡಿದ್ದರೂ, ಸದರಿ ಅಧ್ಯಾದೇಶದ ಅಡಿಯಲ್ಲಿ ಮಾಡಲಾದ ಯಾವುದೇ ಕೃತ್ಯ ಅಥವಾ ಕೈಗೊಂಡ ಯಾವುದೇ ಕ್ರಮವನ್ನು ಈ ಅಧಿನಿಯಮದ ಅಡಿಯಲ್ಲಿ ಮಾಡಲಾದುದು ಅಥವಾ ಕೈಗೊಳ್ಳಲಾದುದು ಎಂದು ಭಾವಿಸತಕ್ಕದ್ದು.

The above translation of the Karnataka Prevention of Incitement to refuse or to Defer Payment of Tax, 1981 (52 of 1981) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

**GOVERNOR OF KARNATAKA**
ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
ಪಿ.ಆರ್. 1193
**ಜಿ.ಕೆ. ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**ಅಧಿಸೂಚನೆ**

**ಸಂಖ್ಯೆ : ಸಂವ್ಯಶಾಇ 60 ರಾಶಾಪ್ರ 2006, ಬೆಂಗಳೂರು, ದಿನಾಂಕ: 17ನೇ ಜುಲೈ 2006**

ಕರ್ನಾಟಕ (ಸಂಡೂರು ಪ್ರದೇಶ) ಇನಾಮುಗಳು ರದ್ದಿಯಾತಿ ಅಧಿನಿಯಮ, 1976 (1976 ರ54) ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

## ಕರ್ನಾಟಕ (ಸಂಡೂರು ಪ್ರದೇಶ) ಇನಾಮುಗಳ ರದ್ದಿಯಾತಿ ಅಧಿನಿಯಮ, 1976

### ಅಧ್ಯಾಯ – I

### ಪ್ರಾರಂಭಿಕ

1. ಸಂಕ್ಷಿಪ್ತ ಹೆಸರು, ವ್ಯಾಪ್ತಿ, ಅನ್ವಯ ಮತ್ತು ಪ್ರಾರಂಭ.
2. ವ್ಯಾಖ್ಯೆಗಳು.

### ಅಧ್ಯಾಯ -II

### ರಾಜ್ಯದಲ್ಲಿನ ಇನಾಮುಗಳ ರದ್ದಿಯಾತಿ ಮತ್ತು ಅವುಗಳನ್ನು ನಿಹಿತಗೊಳಿಸುವುದು ಮತ್ತು ಅದರ ಪರಿಣಾಮಗಳು.

3. ಇನಾಮುಗಳ ರದ್ದಿಯಾತಿ, ಅವುಗಳನ್ನು ನಿಹಿತಗೊಳಿಸುವುದು ಮತ್ತು ಅದರ ಪರಿಣಾಮಗಳು.
4. ಅನುಭೋಗದಾರರಾಗಿ ನೋಂದಾಯಿತರಾಗುವ ಹಕ್ಕು.
5. ಕೆಲವು ಭೂಮಿಗಳನ್ನು ನೋಂದಾಯಿಸತಕ್ಕದ್ದಲ್ಲ.

6. ಕಟ್ಟಡಗಳನ್ನು ನಿಹಿತಗೊಳಿಸುವುದು.
7. ಕೃಷಿಯೇತರ ಉದ್ದೇಶಗಳಿಗಾಗಿ ಉಪಯೋಗಿಸಲಾದ ಕೃಷಿ ಭೂಮಿಯ ಹಕ್ಕು.
8. ರಾಜ್ಯ ಸರ್ಕಾರಕ್ಕೆ ಭೂ ಕಂದಾಯವನ್ನು ಸಂದಾಯ ಮಾಡುವ ಹೊಣೆಗಾರಿಕೆ.
9. ಕೆಲವು ಪ್ರಕರಣಗಳಲ್ಲಿ ಹಕ್ಕನ್ನು ರಕ್ಷಿಸುವುದು.

**ಅಧ್ಯಾಯ -III**

**ಅನುಭೋಗದಾರನೆಂದು ನೋಂದಾಯಿಸುವುದು**

10. ಅನುಭೋಗದಾರನೆಂದು ನೋಂದಾಯಿಸಿಕೊಳ್ಳುವ ಕಾರ್ಯವಿಧಾನ.
11. ಕಂತು ಸಂದಾಯ ಇತ್ಯಾದಿ.

**ಅಧ್ಯಾಯ IV**

**ವೈಯಕ್ತಿಕ ಇನಾಮುಗಳ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಮೊತ್ತವನ್ನು ನಿರ್ಧರಿಸುವುದು**

12. ಸಂದಾಯ ಮಾಡಬೇಕಾದ ಮೊತ್ತವನ್ನು ನಿರ್ಧರಿಸುವ ಬಗೆ.
13. ಸಂದಾಯ ಮಾಡಬೇಕಾದ ಮೊತ್ತ.
14. ಮೊಬಲಗಿನ ಸಂದಾಯ.
15. ಮಧ್ಯಕಾಲೀನ ಸಂದಾಯ.
16. ಸಂದಾಯವಾಗಬೇಕಾದ ಒಟ್ಟು ಮೊಬಲಗನ್ನು ಜಿಲ್ಲಾಧಿಕಾರಿಯು ನಿರ್ಧರಿಸುವುದು.
17. ಮೊಬಲಗಿನಲ್ಲಿ ಹಿತಾಸಕ್ತಿಯುಳ್ಳ ವ್ಯಕ್ತಿಗಳಿಗೆ ನೋಟೀಸ್ ನೀಡುವುದು.
18. ಜಿಲ್ಲಾಧಿಕಾರಿಯಿಂದ ಮೊತ್ತದ ಹಂಚಿಕೆ.
19. ಮೊಬಲಗಿನ ಹಂಚಿಕೆಯ ಕಾರ್ಯವಿಧಾನ.
20. ಲೇಣಿದಾರರ ಹಕ್ಕುಸಾಧನೆಗಳು.
21. ಮೊಬಲಗಿನಲ್ಲಿ ಹಿತಾಸಕ್ತಿಯ ಪ್ರಾಪ್ತಿ.

**ಅಧ್ಯಾಯ –V**

**ಧಾರ್ಮಿಕ ಅಥವಾ ಧರ್ಮಾರ್ಥ ಇನಾಮುಗಳ ಸಂಬಂಧದಲ್ಲಿ ಸಂದಾಯವಾಗಬೇಕಾದ ಮೊಬಲಗು**

22. ಸಂದಾಯವಾಗಬೇಕಾದ ಮೊಬಲಗು.
23. ಜಿಲ್ಲಾಧಿಕಾರಿಯು ಮೊಬಲಗನ್ನು ನಿರ್ಧರಿಸುವುದು.

**ಅಧ್ಯಾಯ –VI**

**ಸಂಕೀರ್ಣ**

24. ವ್ಯಕ್ತಿಯು ಅನುಭೋಗದಾರನೆಂದು ನೋಂದಾಯಿಸಿಕೊಳ್ಳಬಹುದಾದ ಭೂಮಿಯ ವಿಸ್ತೀರ್ಣ.
25. ರಾಜ್ಯ ಸರ್ಕಾರದಲ್ಲಿ ನಿಹಿತವಾಗುವ ಭೂಮಿಗಳ ವಿಲೇವಾರಿ.
26. ವಿಭಾಗಾಧಿಕಾರಿಯಿಂದ ಪುನರೀಕ್ಷಣೆ.
27. ವಿಭಾಗಾಧಿಕಾರಿಯಿಂದ ನಿಯಂತ್ರಣ.
28. ರಾಜ್ಯ ಸರ್ಕಾರದಿಂದ ಪುನರೀಕ್ಷಣೆ.
29. 8, 16 ಮತ್ತು 24ನೇ ಪ್ರಕರಣಗಳ ಅಡಿಯಲ್ಲಿನ ಆದೇಶದ ಮೇಲೆ ಮೇಲ್ಮನವಿ.
30. ತಪ್ಪಾಗಿ ಅಥವಾ ಹೆಚ್ಚಾಗಿ ಮಾಡಿದ ಸಂದಾಯಗಳನ್ನು ಭೂ ಕಂದಾಯದ ಬಾಕಿ ಎಂಬಂತೆ ವಸೂಲಿ ಮಾಡುವುದು.
31. ಜಿಲ್ಲಾಧಿಕಾರಿಯಿಂದ ವಿಚಾರಣೆಗಳು.
32. ಈ ಅಧಿನಿಯಮದ ಅಡಿಯಲ್ಲಿ ಅರ್ಜಿಗಳು, ಮನವಿಗಳು, ಇತ್ಯಾದಿಗಳ ಮೇಲೆ ಸಂದಾಯ ಮಾಡಬೇಕಾದ ಶುಲ್ಕ.
33. ಕೆಲವು ಸಂದರ್ಭಗಳಲ್ಲಿ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಗೆ ಪ್ರತಿಷೇಧ.
34. ನಿಯಮ ರಚನಾಧಿಕಾರ.
35. ದಂಡನೆಗಳು.
36. ತೊಂದರೆಗಳನ್ನು ನಿವಾರಿಸುವ ಅಧಿಕಾರ.
37. ರಾಜ್ಯ ವಿಧಾನ ಮಂಡಲದ ಮುಂದೆ ನಿಯಮಗಳು ಮತ್ತು ಆದೇಶಗಳನ್ನು ಮಂಡಿಸುವುದು.
38. ನಿರಸನ.

ಅನುಸೂಚಿ–I

ಅನುಸೂಚಿ-II

ಕರ್ನಾಟಕ (ಸಂಡೂರು ಪ್ರದೇಶ) ಇನಾಮುಗಳ ರದ್ದಿಯಾತಿ ಅಧಿನಿಯಮ, 1976

ಉದ್ದೇಶ ಮತ್ತು ಕಾರಣಗಳ ಹೇಳಿಕೆಗಳು

I

**1976ರ ಅಧಿನಿಯಮ 54.–** ಸ್ವಾತಂತ್ರ್ಯ ಬಂದಾಗಿನಿಂದಲೂ ಜಹಗೀರುದಾರರ, ಇನಾಮುದಾರರ, ಜಮೀನ್ದಾರರೇ ಮುಂತಾದವರ ಭೂಮಿಯ ಮೇಲಿನ ಎಲ್ಲ ವಿಶೇಷ ಹಿಡುವಳಿ ಹಕ್ಕನ್ನು ರದ್ದುಗೊಳಿಸಲು ಕ್ರಮ ಕೈಗೊಳ್ಳಲಾಗಿದೆ. ಈ ಸಂಬಂಧದಲ್ಲಿನ ಶಾಸನಾತ್ಮಕ ಕ್ರಮವನ್ನು ಹಿಂದಿನ ಮೈಸೂರು ರಾಜ್ಯದಲ್ಲಿ ಪೂರ್ಣಗೊಳಿಸಲಾಗಿದ್ದು, ವೈಯಕ್ತಿಕ ಇನಾಮುಗಳನ್ನು ಹೈದರಾಬಾದ್ ಮತ್ತು ಮುಂಬಯಿ ಪ್ರದೇಶಗಳಲ್ಲಿ ಸಹ ರದ್ದುಗೊಳಿಸಲಾಗಿದೆ. ಮುಂಬಯಿ ಮತ್ತು ಹೈದರಾಬಾದ್ ಪ್ರದೇಶಗಳಲ್ಲಿ ಧಾರ್ಮಿಕ ಹಾಗೂ ಧರ್ಮಾರ್ಥ ಇನಾಮುಗಳನ್ನು ರದ್ದುಗೊಳಿಸುವುದಕ್ಕಾಗಿ, ರಾಜ್ಯ ವಿಧಾನ ಮಂಡಲವು ಇತ್ತೀಚೆಗೆ ವಿಧೇಯಕವೊಂದನ್ನು ಅಂಗೀಕರಿಸಿದೆ. ಪ್ರಸ್ತುತ ವಿಧೇಯಕವು ಹಿಂದಿನ ಸಂಡೂರು ಪ್ರದೇಶದಲ್ಲಿನ ವೈಯಕ್ತಿಕ ಮತ್ತು ಧಾರ್ಮಿಕ ಹಾಗೂ ಧರ್ಮಾರ್ಥ ಇನಾಮುಗಳೆರಡರ ರದ್ದತಿಯನ್ನು ನಿಶ್ಚಿತಪಡಿಸಲು ಉದ್ದೇಶಿಸಲಾಗಿದೆ. ಈ ಎಲ್ಲ ಇನಾಮುಗಳು ಅಧಿನಿಯಮದ ಅಡಿಯಲ್ಲಿ ಅಧಿಸೂಚಿತವಾಗುವ ದಿನಾಂಕದಿಂದ ಸರ್ಕಾರದಲ್ಲಿ ನಿಹಿತವಾಗುತ್ತವೆ. ವೈಯಕ್ತಿಕ ಮತ್ತು ಧರ್ಮಾರ್ಥ ಹಾಗೂ ಧಾರ್ಮಿಕ ಇನಾಮುದಾರರ ಅಧೀನದಲ್ಲಿರುವ ಭೂಮಿಗಳನ್ನು ಹೊಂದಿರುವ ಗೇಣಿದಾರರು, ಗೇಣಿದಾರಿಕೆಯ ನಿಬಂಧನೆಗಳನ್ನು ಆಧರಿಸಿ ಭೂ ಕಂದಾಯದ ಕೆಲವೊಂದು ಗುಣಕ ಮೊತ್ತವನ್ನು ಸಂದಾಯ ಮಾಡಿದ ಮೇಲೆ ಅನುಭೋಗದ ಹಕ್ಕುಗಳನ್ನು ಪಡೆಯುತ್ತಾರೆ. ಗೇಣಿದಾರರು ಅನುಭೋಗದ ಹಕ್ಕುಗಳನ್ನು ಪಡೆಯಲು ಇನಾಮಿನಲ್ಲಿ ಒಳಗೊಂಡಿರುವ ಭೂಮಿಗೆ ಸಂದಾಯ ಮಾಡಬೇಕಾಗಿರುವ ಕಂತಿನ ಮೊತ್ತದಷ್ಟು ಹಣವನ್ನು ವೈಯಕ್ತಿಕ ಇನಾಮುಗಳನ್ನು ಹೊಂದಿರುವವರಿಗೆ ಕೊಡಲಾಗುತ್ತದೆ. ಧಾರ್ಮಿಕ ಹಾಗೂ ಧರ್ಮಾರ್ಥ ಇನಾಮುಗಳನ್ನು ಹೊಂದಿರುವ ಸಂಸ್ಥೆಗಳು, ಅವು ಹೊಂದಿರುವ ಇನಾಮುಗಳಲ್ಲಿ ಒಳಗೊಂಡಿರುವ ಭೂಮಿಗಳ ಮೇಲೆ ಸಂದಾಯ ಮಾಡಬೇಕಾದ ಭೂಕಂದಾಯದ 10 ರಷ್ಟಕ್ಕೆ ಸಮನಾದ ಒಂದು ವಾರ್ಷಿಕ ಉಂಬಳಿ ಅನುದಾನವನ್ನು ಪಡೆಯುತ್ತವೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ) ಭಾಗ IV– 2ಎ, ದಿನಾಂಕ 11.9.1973ರಲ್ಲಿ ಸಂಖ್ಯೆ 728 ಎಂದು ಪ್ರಕಟವಾಗಿದೆ).

II

**1979ರ ತಿದ್ದುಪಡಿ ಮಾಡುವ ಅಧಿನಿಯಮ 32.–** ಕರ್ನಾಟಕ ಕೆಲವು ಇನಾಮುಗಳ ರದ್ದಿಯಾತಿ ಅಧಿನಿಯಮ, 1977ರ (1978ರ ಕರ್ನಾಟಕ ಅಧಿನಿಯಮ 10) 11ನೇ ಪ್ರಕರಣದ ಅಡಿಯಲ್ಲಿ, ಅಧಿನಿಯಮವನ್ನು ಜಾರಿಗೊಳಿಸಿದ ದಿನಾಂಕದಿಂದ ಆರು ತಿಂಗಳೊಳಗೆ ಅಧಿಭೋಗದಾರನಾಗಿ ನೋಂದಾಯಿಸಿಕೊಳ್ಳಲು ಅರ್ಜಿ ಸಲ್ಲಿಸುವಂತೆ ಅಗತ್ಯಪಡಿಸಲಾಗಿದೆ. ಈ ಅಧಿನಿಯಮವನ್ನು 1978ರ ಜೂನ್ 15ನೇ ದಿನಾಂಕದಂದು ಜಾರಿಗೊಳಿಸಲಾಗಿದೆ. 1976ರ ಕರ್ನಾಟಕ ಅಧಿನಿಯಮ 54ರ 10ನೇ ಪ್ರಕರಣದ ಅಡಿಯಲ್ಲಿ, ಈ ಅಧಿನಿಯಮವನ್ನು ಜಾರಿಗೊಳಿಸಿದ ದಿನಾಂಕದಿಂದ ಆರು ತಿಂಗಳೊಳಗೆ ಅಧಿಭೋಗದಾರನಾಗಿ ನೋಂದಾಯಿಸಿಕೊಳ್ಳಲು ಅರ್ಜಿ ಸಲ್ಲಿಸುವಂತೆ ಅಗತ್ಯಪಡಿಸಲಾಗಿದೆ. ಈ ಅಧಿನಿಯಮವನ್ನು 1976ರ ನವೆಂಬರ್ 8ನೇ ದಿನಾಂಕದಂದು ಜಾರಿಗೊಳಿಸಲಾಗಿದೆ.

ಈ ಎರಡು ಅಧಿನಿಯಮಗಳ ಅಡಿಯಲ್ಲಿ ಅಧಿಭೋಗದಾರರಾಗಿ ನೋಂದಾಯಿಸಿಕೊಳ್ಳಲು ಅರ್ಜಿಗಳನ್ನು ಸ್ವೀಕರಿಸುವುದಕ್ಕೆ ಇದ್ದ ಕೊನೆಯ ದಿನಾಂಕವು, ಸದರಿ ಅಧಿನಿಯಮಗಳ ಅಡಿಯಲ್ಲಿ ನಿಯಮಗಳನ್ನು ಅಖೈರುಗೊಳಿಸುವುದಕ್ಕೆ ಮುಂಚೆಯೇ ಆಗಿಹೋದುದರಿಂದ, ಆ ಮೂಲಕ ಅರ್ಜಿದಾರರಿಗೆ ಉಂಟಾದ ತೊಂದರೆಯನ್ನು, ಅರ್ಜಿಗಳನ್ನು ಸ್ವೀಕರಿಸುವುದಕ್ಕೆ ಇದ್ದ ಕೊನೆಯ ದಿನಾಂಕವನ್ನು 1980ರ ಮಾರ್ಚ್ 31ರ (ಸೇರಿದಂತೆ)ವರೆಗೆ ವಿಸ್ತರಿಸುವ ಮೂಲಕ ನಿವಾರಿಸಲು ಉದ್ದೇಶಿಸಲಾಗಿದೆ. ಕರ್ನಾಟಕ (ಸಂಡೂರು ಪ್ರದೇಶ) ಇನಾಮುಗಳ ರದ್ದಿಯಾತಿ ಅಧಿನಿಯಮ, 1976ರ 1ನೇ ಪ್ರಕರಣದ (4)ನೇ ಉಪಪ್ರಕರಣಕ್ಕೆ ಔಪಚಾರಿಕ ತಿದ್ದುಪಡಿಯೊಂದನ್ನು ಸೇರಿಸುವ ಅವಕಾಶವನ್ನೂ ಬಳಸಿಕೊಳ್ಳಲಾಗಿದೆ.

ಆದ್ದರಿಂದ ಈ ವಿಧೇಯಕ.

(1979ರ ವಿ.ಸ.ವಿ ಸಂಖ್ಯೆ 4106 ರಿಂದ ಪಡೆಯಲಾಗಿದೆ).

III

**1981ರ ತಿದ್ದುಪಡಿ ಅಧಿನಿಯಮ 23.–** ಕರ್ನಾಟಕ (ಧಾರ್ಮಿಕ ಹಾಗೂ ಧರ್ಮಾರ್ಥ) ಇನಾಮುಗಳ ರದ್ದಿಯಾತಿ ಅಧಿನಿಯಮ, 1955, ಇನಾಮುಗಳ ರದ್ದಿಯಾತಿ (ಸಂಡೂರು ಪ್ರದೇಶ) ಅಧಿನಿಯಮ, 1976 ಮತ್ತು ಕೆಲವು ಇನಾಮುಗಳ ರದ್ದಿಯಾತಿ ಅಧಿನಿಯಮ, 1977 ರ ಅಡಿಯಲ್ಲಿ ಸರ್ಕಾರದಲ್ಲಿ ನಿಹಿತವಾಗಿರುವ ಭೂಮಿಗಳ ಅಧಿಭೋಗದಾರರಾಗಿ ನೋಂದಾಯಿಸಿಕೊಳ್ಳುವುದಕ್ಕಾಗಿ ಅರ್ಜಿಗಳನ್ನು ಸಲ್ಲಿಸುವ ಕೊನೆಯ ದಿನಾಂಕವು ಮುಕ್ತಾಯವಾಗಿದೆ. ಅನೇಕ ಪ್ರಾಮಾಣಿಕ ಅಧಿಭೋಗದಾರರು ತಮ್ಮ ಅರ್ಜಿಗಳನ್ನು ಸಲ್ಲಿಸಲು ಸಾಧ್ಯವಾಗದೆ ಇದ್ದುದರಿಂದ ಸಮಯವನ್ನು ವಿಸ್ತರಿಸುವಂತೆ ಕೋರಿರುವ ಮನವಿಗಳನ್ನು ಸ್ವೀಕರಿಸಲಾಗಿದೆ. 1981ರ ಜೂನ್ 30ನೇ ದಿನಾಂಕದವರೆಗೆ ಈ ಸಮಯವನ್ನು ವಿಸ್ತರಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ) ಭಾಗ IV– 2ಎ, ದಿನಾಂಕ 3.2.1981ರ ಪುಟ 4ರಲ್ಲಿ ಸಂಖ್ಯೆ 91 ಎಂದು ಪ್ರಕಟವಾಗಿದೆ).

